ಅರೆಬಾಸೆ

# ಮುಡ್ಪು

ಮಾಂಖ



## ಅರೆಬಾಸೆ ತಿಂಗ ಪತ್ರಿಕೆ

ವಿನೋದ್ ಮೂಡಗದ್ದೆ ಸಾರಥ್ಯಲಿ









---


ಮುದ್ರಕರು : ನೇಹಾ ಕ್ರಿಯೇಷನ್ಸ್, ಬನಶಂಕರಿ 2ನೇ ಹಂತ, ಬೆಂಗಳೂರು–70.

ಕೂಡಕಂಡಿರ ತಮ್ಮಯ್ಯ, 98453 19878, 080–26710552

**ಸಂಪಾದಕೀಯ ಮಂಡಳಿ**
**ಪ್ರಧಾನ ಸಂಪಾದಕ:**
ವಿನೋದ್ ಮೂಡಗದ್ದೆ

**ಸಂಪಾದಕ ಮಂಡಳಿ:**
ಅಮೆಮನೆ ಪಾಲಾಕ್ಷ
ಕೊಂಬಂಡ ಜೀವನ್

## ಸಂಪಾದಕೀಯ

ಎಲ್ಲವ್ಕೂ ಯುಗಾದಿ ಹಬ್ಬದ ಶುಭಾಶಯಗ, ಪೊನ್ನಿ ತಿಂಗಳ ಸಂಚಿಕೆಗೆ ಬಾಳಷ್ಟ್ ಜನ ಮೆಚ್ಚುಗೆ ಸೂಚಿಸಿಯೊಳೊ ಎಲ್ಲವ್ಕೂ ಧನ್ಯವಾದಗ, ಈಗ ಮಾಯಿ ತಿಂಗಳ ಸಂಚಿಕೆ ನಿಮ್ಮ ಮುಂದೆ ಉಟ್ಟು.

ಕಾಫಿ, ಮೆಣ್ಸ್, ಅಡಿಕೆ ಎಲ್ಲಾ ಕೆಲ್ಸಗ ಮುಗ್ದ್ ಆರಾಮ್‌ಲಿ ಇರ್ವ ತಿಂಗ. ಕುಟುಂಬವಾರು ಕ್ರಿಕೆಟ್, ಮದ್ವೆಗ, ಹರಿಸೇವೆ, ದೈವದ ಕೋಲ ಹಿಂಗೆ ಇನ್ನೆರಡ್ ತಿಂಗ ಕಳ್ದದೆ. ಪೆರಾಜೆ ಕ್ರಿಕೆಟ್ ಕಪ್, ಕೆದಂಬಾಡಿ ಕಪ್, ಪೈಕೇರ ಕಪ್ ಹಿಂಗೆ ಒಂದರ ಹಿಂದೆ ಒಂದ್ ತ ಕ್ರಿಕೆಟ್ ಪಂದ್ಯಾಟಗ ಉಟ್ಟು. ದೂರ ದೂರಲಿ ಇರ್ವ ಇಲ್ಲೆ ಎಲ್ಲೋ ಗೊತ್ತೇ ಇಲ್ಲದೆ ಬೇರೆ ಕಡೆ ಇರ್ವ ಎಷ್ಟೋ ಕುಟುಂಬಗಳ ಒಂದ್ ಮಾಡ್ದಂತ ಕ್ರಿಕೆಟ್ ಇದ್. ಹಂಗೆನೆ ಕಬ್ಬಡಿ, ಫುಟ್‌ಬಾಲ್ ಆಟೋಟಗ ಸ ಈ ಸಲ ಕುಟುಂಬವಾರು ನಡ್ಯಕೆ ಉಟ್ಟು. ಆದಷ್ಟ್ ಎಲ್ಲ ಕುಟುಂಬಗ ತಮ್ಮ ಹೆಸರ್‌ಗಳ್ನ ನೋಂದಾಯಿಸಿ ಈ ಎಲ್ಲಾ ಆಟೋಟಗಳ ಯಶಸ್ವಿಗೆ ಸಹಕರಿಸುನೊ.

ಈ ಸಲ ಎಲ್ಲಾ ಕಡೆ ನೀರ್ ಇಲ್ಲದೆ ನೆಲ ಎಲ್ಲಾ ಒಣ್ಗಿ ಹೋವ್ಟು. ಕುಡಿವ ನೀರಿಗೆ ಸ ಕಷ್ಟದ ಸ್ಥಿತಿ ಆವ್ಟು. ಬರ್ವ ಮಳೆಗಾಲಲಿ ಆದರೂ ನಾವ್ಗ ಇಂಗು ಗುಂಡಿಗಳ್ನ ಮಾಡಿ, ಇಲ್ಲೆ ತಗ್ಗು ಪ್ರದೇಶಗಳ್ಲಿ ನೀರ್ನ ಇಂಗಿಸಿ ಅಂತರ್ಜಲ ಮಟ್ಟನ ಹೆಚ್ಚಸಿಕೆ ಪ್ರಯತ್ನ ಮಾಡ್ನೊ ಇಲ್ಲೆ ತೇಳ್ರೆ ಇನ್ನು ಬರ್ವ ವರ್ಷಗಳ್ಲಿ ಇನ್ನಷ್ಟ್ ಪರಡಾಡಿಕೆ ಆದು.

ಬೇಸಿಗೆ ರಜೆಲಿ ಎಲ್ಲವೂ ಊರು ಕಡೆ ಮುಖ ಮಾಡೋ ಹೊತ್ತು. ಮಕ್ಕಳಿಗಂತೂ ತಾತ ಅವ್ವನತ್ರ ಹೋಕೆ ಕುಸಿನೋ ಕುಸಿ ಅಂತೂ ಈ ಎರಡ್ ತಿಂಗ ಯಾವುದೇ ತಲೆ ಬಿಸಿ ಇಲ್ಲದೆ ಆಟ, ಓಟಲೇ ಕಳ್ದದೆ.

ಮುಂದಿನ ಸಂಚಿಕೆಲಿ ಇನ್ನಷ್ಟ್ ವಿಷಯಗಳೊಟ್ಟಿಗೆ ಕಾಂಬೊನೊ.. ಅಲ್ಲಿ ಮುಟ್ಟ ನಿಮ್ಮ ಸಹಕಾರ ಹಿಂಗೆ ಇರಲಿ.

**–ಇಂತಿ ವಿನೋದ್**

## ಮುಡ್ಪುನ ಒಳ್ಗೆ

# ಸಿನ್ಮ



–ಹೊಳೆಕೆರೆ ರಾಮಪ್ಪ

ಅಪ್ಪ ಅಮ್ಮ ಗುರುಹಿರಿಯರ ಆಶೀರ್ವಾದದೊಟ್ಟಿಗೆ

**ಕೃತಜ್ಞತೆಗ**

ಶ್ರೀ ಯೋಗಿರಾಜ್ ವೇದಾದ್ರಿ ಮಹರ್ಷಿ–ಆಧ್ಯಾತ್ಮ ಗುರು–ಕೊಯಂಬತ್ತೂರ್
ಶ್ರೀ ಸ್ವಾಮಿ ಜಗದಾತ್ಮಾನಂದ–ಆಧ್ಯಾತ್ಮ ಚಿಂತಕರ್–ಶ್ರೀ ರಾಮಕೃಷ್ಣ–ವಿವೇಕಾನಂದ ಆಶ್ರಮ–ಪೊನ್ನಂಪೇಟೆ
ಶೀಮತಿ ಖೋರ್‌ಶೆಡ್ ಭಾವ್‌ನಾಗ್ರಿ–ಮುಂಬೈ–ಲೇಖಕಿ–ದಿ ಲಾ (ಸ್) ಆಫ್ ಸ್ಪಿರಿಟ್ ವರ್ಡ್

**ಸಿನ್ಮನ ಸೃಷ್ಟಿ ಮಾಡ್‌ವವ್**



## ಚಿತ್ರಕತೆ ಪರಿಕಲ್ಪನೆ: ಹೊಳೆಕರೆ ಚೆಂಗಪ್ಪ – ಕಳತ್ಮಾಡು

## ಭಾಗ–2

**.................ಸಿಲ್ಮ ಭಾಗ 1 ರ ಹಿಂದೆದ್ ನೋಟ**

ಕೈಲಿ ಸೀಮೆಣ್ಣೆ ಒತ್ತೆ ಹಿಡ್ಕಂಡ್ ಬಿಕೆಬಿ ಗದ್ದೆ ಏರಿಲಿ ಬರ್‍ತಾ ಇದ್ದ ನೆರೆಮನೆ ಅಜ್ಜಪ್ಪ ಮುಂಡ ಹೈದಂಗ ಗಂಟ್ ಕಟ್ಟಿ ಮಡ್ಗಿದ್ದ ನೊಜದೊಳಗೆ ಕಾಲ್ ಹಾಕಿ ಏರಿ ಬರೀಲಿ ಬಿದ್ದಿದ್ದದೆ. ಕೊಳ್ಳಿದೆವ್ವನ ನೋಡಿಕೆ ಹೋದ ಚಾಮಿ ಅದೇ ನೊಜದ ಗಂಟ್ ಒಳಗೆ ಕಾಲ್ ಹಾಕಿ ಮುಂಗ್‌ರ್‌ಸಿ ಬಿದ್ದದೆ. ಬರೀಗೆ ಒಣ್ಕಿ ಕಿರ್‍ಚಿದಂವ ದೊಂಡೆ ಮೇಲೆ ಬಿದ್ದ ಅಜ್ಜಪ್ಪನ ಕೈನ ನೂಕಿ, ಕರ್‍ದರೂ ಮಸ್ಕದೇ ಇರ್‍ದುವ ಅಜ್ಜಪ್ಪನ ನೋಡಿ ಇವರ ಹೊಟ್ಟೆ ಒಳಗೆ ಪರಮಾತ್ಮ ಹೋಗಿರಕೂಂತ ಅಂದಾಜಿ ಮಾಡಿಕಣ್ತ್.

**ಪರಮಾತ್ಮಂದ್ ಲೀಲೆ**

ಪರಮಾತ್ಮಂದ್ ಲೀಲೆ ನೋಡೋಕರೆ ನಾವ್ ಚಪ್ಪರ ದಿನ ಸಾಂಯ್‌ಕಾಲ ಮದ್ವೆ ಮನೆಗೆ ಹೋಕು. ಜಂಬರಲಿ ಒಕ್ಲ್ ಯಜ್‌ಮಾನ ಕುಡಿಯಕೆ ಎಲ್ಲವ್‌ಕ್ಕು ಕಳ್ಳ್‌ದ್ ವ್ಯವಸ್ತೆ ಮಾಡಿದ್ದದೆ. ಯಾರೂ ಎಷ್ಟ್ ಬೇಕಾರ್ ಕುಡಿಯಕ್.

**ಎರ್‍ಡ್ ಗಲಾಸ್‌ನವರ ಬಂಡಾಟ**

ಇಲ್ಲಿ ಒಂದ್ ತರ ಜನಗ ಇದ್ದವೆ. ಅವ್ ಮದ್ವೆಗೆ ಬಾದು ಕುಡಿಯಕೆ ಮಾತ್ರ. ಸಿಕ್ಕಿದೇ ದೊಡ್ಡದ್‌ತೇಳಿ ಕುಡ್ದದೇ ಕುಡ್ದದ್. ಒಂದ್ ಸಲ ಅರ್ದ ಗಲಾಸ್ ಹಾಕ್ಸಿಕಂಡ್ ಕುಡ್ದವೆ. ನೀರ್ ಹಾಕಂಬದುಲ್ಲೆ. ಪುನಃ ಇನ್ನೊಂದ್ ಅರ್ದ ಗಲಾಸ್ ದೊಂಡೆಗೆ ಹೊಯ್‌ಕಂಡವೆ. ಹೊಯ್ದ್ ಕೊಡೋವ್ ಇವರ ಮೇಲೆ ಕಣ್ ಮಡಿಗಿದ್ದವೆ. ಇನ್ನೊಂದ್ ಸಲ ಇವ್ ಬಂದರೆ ಬಯ್ದ್ ಬೆರ್‍ಸುವೆ. ಇವ್ ಬಾರೀ ಹುಷಾರ್! ಸ್ನೇಹಿತರ್‌ನ ಕರ್‌ಕಂಡ್ ಹೋಗಿ ಸಿಪಾರಸ್ ಮಾಡ್ಸಿ ಇನ್ನೊಂದ್ ಅರ್ದ ಗಲಾಸ್ ಸ್ವಾಹಃ ಮಾಡುವೆ. ಈಗ ಇವರ ಹೊಟ್ಟೆ ಒಳಗೆ ಹೋದ ಪರಮಾತ್ಮ ಕೆಲ್ಸ ಮಾಡ್ಕೆ ಸುರುಮಾಡ್ದೆ. ಜನಗ ಕುಪ್ಪಿಗ ಎಲ್ಲಾ ಸುತ್ತುತಿರುವಂಗೆ ಕಂಡ್ ಮೇಲೆ ಬಿದ್ದ್ ಬುಡುವೋತೇಳಿ ಬರೀಲಿ ಇರ್‍ವ ಕುರ್ಚಿಲಿ ಕುದ್ ಬುಟ್ಟವೆ. ಕುದ್ದವ್ ಹೆಂಗಾರ್ ಮಾಡಿ ಮಕ್ಕಮರಿಗೆ ಹೇಳಿ ಯಾರಿಗೂ ಗೊತ್ತಾಗದಂಗೆ ಇನ್ನೊಂದ್ ಅರ್ದ ಗಲಾಸ್ ತರ್‍ಸಿಕಂಡವೆ. ಎಲ್ಲಾ ಸೇರಿ ಎರ್‍ಡ್ ಗಲಾಸ್ ಒಳಗೆ ಹೋದಂಗೆ ಇವರ ಕಾಲ್ ಕುರ್ಚಿ ಮೇಲೆ! ತಲೆ ಕುರ್ಚಿ ಕೆಳ್ಗ್!

**ಒಂದ್ ಗಲಾಸ್‌ನವರ ಹೊಡ್ದಾಟ**

ಇನ್ನೊಂದ್ ತರ ಜನಗ ಇದ್ದವೆ. ಇವರ ಪೌರುಷ ನೋಡೊಕರೆ ನಾವ್ ಹಳೇ ಕಾಲಲಿ ಮನೆಲಿ ಮಾಡ್ತಿದ್ದ ಮದ್ವೆನ ನೋಡಕಾಗಿತ್. ಇವ್ ಒಂದ್ ಗಲಾಸ್‌ಕ್ಕಿಂತ  ಹೆಚ್ಚಿಗೆ ಕುಡಿಯಕಿಲ್ಲೆ. ಒಬ್ಬ ಪಾಪದವಂಗೆ ಹೊಡಿಯಕೂತೇಳಿರೆ ಮದ್ವೆ ಚಪ್ಪರ ದಿನ ಮೂರ್ತ ಮಡ್ಗುತಿದ್ದೊ. ಇವ್ ಒಂದ್ ಗಲಾಸ್ ಒಟ್ಟಿಗೆ ಅರ್ದ ಕಾವಂಗ ಚಳ್ಳಿ ಕಾಲಿಮಾಡಿ ಕೋಣಿಯಕೆ ಸುರುಮಾಡುವೆ. ಕೋಣಿಯಕನ ಬೇಕೂಂತ ಆ ಪಾಪದವನ ಕಾಲ್ನ ಇವ್ವೇ ಮೆಟ್ಟಿ ಬುಟ್ಟವೆ. ಮತ್ತೆ ಅಂವನೇ ಮೆಟ್ಟಿಬುಡ್ತೂಂತ ಹೇಳಿ ಅವಂಗೆ ಹೊಡ್ದವೆ. ಅಂವ ತಿರ್ಗಿಸಿ ಹೊಡ್ದರೆ ಅಂವನ ಕತೆ ಮುಗ್ತ್, ಇವ್ ಮುಂದೇ ಸ್ನೇಹಿತರ್‌ಗಳ್ಗೆ ಹೇಳಿ ಮಡ್ಕಂಡಿದ್ದವೆ. ಎಲ್ಲಾ ಸೇರಿಕಂಡ್ ಕೈಗೆ ಸಿಕ್ಕಿದ ಕೋಲ್ ಕುರ್ಚಿ ತಕಂಡ್ ಬೆಂಚಿ ಮೇಲೆಂದ ಹಾರಿ ಬೆರ್ಸಿ ಹೊಡ್ದವೆ. ಕುರ್ಚಿ ಬೆಂಚಿ ಎಲ್ಲಾ ಹೊಡಿ ಹೊಡಿ.! ಮದ್ವೆಗೆ ಬಂದ ಊರ್ ಅಕ್ಕಂದಿರ್ ಪಾಪದವನ ಕೋಂಬರೆಗೆ ಸೇರ್ಸಿ ಬಾಗ್‌ಲ್‌ಗೆ ಅಡ್ಡ ಕುದ್ದ್ ಎದ್ದ್ ಬಿದ್ದ್ ರಾಜಿ ಮಾಡದೇ ಇದ್ದರೆ ಆ ವರ್ಷ ಅಂವ ಎತ್ತ್ ಕಟ್ಟಿದಂಗೆ!

**ಅರ್ದ ಗಲಾಸ್‌ನವರ ಆದರ್ಶ**

ಮತ್ತೆ ಒಂದ್ ತರ ಒಳ್ಳೆ ಜನಗ ಇದ್ದವೆ. ಚಪ್ಪರಕೆ ಬಂದೊ, ನಾಕ್ ಜನ್ರ ಹತ್ರ ಮಾತಾಡ್ದೊ, ಬರೀ ಅರ್ದ ಗಲಾಸ್ ಕುಡ್ದೊ, ಲಾಯಿಕಾಗಿ ಉಂಡೊ, ಬರೀಲಿ ಕೊಣ್ದೊ, ಡೀಸೆಂಟ್ ಆಗಿ ಮನೆಗೆ ಹೋದೊ. ಇವರ ವಿಷ್ಯ ಏನೂ ಮಾತಾಡುವಂಗೆ ಇಲ್ಲೆ.

**ಒಳ್ಳೆವ್ ಕೆಟ್ಟವ್**

ಬಾಯಿಲಿ ಇನ್ನೂ ಹಲ್ ಹುಟ್ಟದ ಒಂದ್ ಕೂಸುಗೆ ಈ ಅರ್ದ ಗಲಾಸ್, ಒಂದ್ ಗಲಾಸ್ ಮತ್ತೆ ಎರ್ಡ್ ಗಲಾಸ್ ಕುಡ್ದವ್‌ರ್ನ ತೋರ್ಸಿ ಇವರ ಪೈಕಿ ಯಾರ್ ಒಳ್ಳೆಯವ್‌ತ ಕೇಳ್ರೂ, ಆ ಕೂಸು ಅರ್ದ ಗಲಾಸ್ ಕುಡ್ದವ್‌ರ್‌ನ ತೋರ್ಸಿದೆ. ಮತ್ತೆ ಇನ್ನಿಬ್ಬರ್ನ ಒಳ್ಳೆವ್ ಅಲ್ಲಾಂತ ತಲೆ ಅಲ್ಲಾಡ್ಸಿದೆ.

**ತಪ್ಪ್ ಒಕ್ಲ್ ಯಜಮಾನಂದ್ ಅಲ್ಲ**

ಬಂದವರ ಒಳ್ಳೆದ್ ಕೆಟ್ಟದ್ ಅವತಾರಗಳಿಗೆ ಜಂಬರಲಿ ಕಳ್ ಮಡ್ಗಿದ್ದವ್ ಕಾರಣತೇಳಿ ಅವರ್ನ ದೂರಿಕೆ ಆದೆಯ? ಜಂಬರಲಿ ಕಳ್ ಮಡ್‌ಗದಿದ್ದರೆ ಕರ್ಸಿದವ್ಕೆ ಜನ ನಾಳೆ ಮರ್ಯಾದಿ ಕೊಟ್ಟವೆಯಾ?

**ಎಲ್ಲಾ ಮನ್ಸರೂ ಒಳ್ಳೆಯವ್ ಆಕೆ ಇಷ್ಟ ಪಟ್ಟವೆ**

ಈ ನೂರ್ ವರ್ಷದ ಸಿಲ್ಮ್‌ಲಿ ಯಾರೂ ಕೆಟ್ಟ ಪಾತ್ರ ಮಾಡಿಕೆ ಇಷ್ಟ ಪಡುದುಲ್ಲೆ. ಎಲ್ಲವ್ಕೂ ಒಳ್ಳೆ ಪಾತ್ರನೇ ಬೇಕು. ಕೆಟ್ಟ ಪಾತ್ರ ಇಲ್ಲದಿದ್ದರೆ ಸಿಲ್ಮ್ ಓಡ್ದುಲ್ಲೆ. ಒಳ್ಳೆ ಕೆಟ್ಟ ಪಾತ್ರದಾರಿಗಳ್ನ ದೇವ್ರೇ ಆಯ್ಕೆ ಮಾಡ್ರೆ ಪಕ್ಷಪಾತ ಮಾಡ್ದಂಗೆ ಆದೆ. ಅದ್ಕೆ ದೇವ್ರ್ ಪಾತ್ರಗಳ ಆಯ್ಕೆಗೆ ಒಂದ್ ಉಪಾಯ ಮಾಡಿ ಮಡಿಗುಟ್ಟು!

**ಮೂರ್ ಗುಣಗ**

ಸಾತ್ವಿಕ, ರಾಜಸಿಕ, ತಾಮಸಿಕ ಇವ್ ಮೂರ್ ಗುಣಗಳ್‌ನ ದೇವ್ರ್ ಪ್ರಕೃತಿಲಿ ಮಡಿಗುಟ್ಟು. ಮನ್ಸನ ಒಳ್ಳೆವ್ ಕೆಟ್ಟವ್‌ತ ಹೇಳ್ದು ಈ ಮೂರ್ ಗುಣಗಳ್‌ಂದ. ಸಾತ್ವಿಕ ಗುಣ ಇರವ್ ಯಾಗೋಳ್ ಒಳ್ಳೆಯವ್ ಆಗಿದ್ದವೆ. ಇವರ್ನ ಯಾಗ ಬೇಕಾರೂ ನಂಬಕ್. ರಾಜಸ ಮತ್ತೆ ತಾಮಸ ಗುಣ ಇರವ್ ಒಂದೊಂದ್ ಸಲ ಕೆಟ್ಟವ್ ಆಗ್ ಬುಟ್ಟವೆ. ಇವರ್ನ ಯಾಗೋಳ್ ನಂಬಿಕೆ ಆದುಲ್ಲೆ.

**ಗಾಳಿ ಕಳ್ಳ್**

ಜಂಬರಲಿ ಒಕ್ಲ್ ಯಜಮಾನ ಕಳ್‌ದ್ ವ್ಯವಸ್ತೆ ಮಾಡ್‌ವಂಗೆ ಈ ನೂರ್ ವರ್ಷದ ಸಿಲ್ಮ್‌ಲಿ ದೇವ್ರು ಕಳ್‌ದ್ ವ್ಯವಸ್ತೆ ಮಾಡಿ ಮಡಿಗುಟ್ಟು. ಈ ಕಳ್‌ದ್ ಬ್ರಾಂಡ್ ಹೆಸ್ರ್ "ಜಂಕೋಳಿ". ಜಂಕೋಳಿತೇಳಿರೆ "ಜಂಬದ ಕೋಳಿ", ಈ ಕೋಳಿ ಅಂಕಾರದ ಮೊಟ್ಟೆಂದ ಹುಟ್ಟಿದ್ದದೆ. ವೈನ್‌ನ ಹೆಂಗೆ ಹಣ್ಣ್, ಬೆಲ್ಲ, ಈಸ್ಟ್, ಸುಣ್ಣ, ಮಣ್, ಮಸಿ ಹಾಕಿ ಮಾಡ್ವೆ, ಹಂಗೆ ದೇವ್ರ್ ಜಂಕೋಳಿ ಬ್ರಾಂಡ್‌ನ, ಕಾಮ, ಕ್ರೋದ, ಲೋಭ, ಮೋಹ, ಮದ, ಮತ್ಸರ ಹಾಕಿ ಮಾಡಿದ್ದದೆ. ಸಾತ್ವಿಕ, ರಾಜಸಿಕ, ತಾಮಸಿಕ ಗುಣಗಳ್‌ನ ಜಂಕೋಳಿ ಒಳಗೆ ಹಾಕಿ ಮೂರ್ ತರದ್ ಕಿಕ್ ಹೊಡಿವಂಗೆ ಏರ್ಪಾಡ್ ಮಾಡಿದ್ದದೆ.

**ದೇವ್ರ್ ಪಕ್ಷಪಾತಿ ಅಲ್ಲ**

ಅರ್ದ ಗಲಾಸ್ ಜಂಕೋಳಿ ಕುಡ್ದವ್ ಸಾತ್ವಿಕ ಕಿಕ್ ಹೊಡ್ಸಿಕಂಡ್ ಒಳ್ಳೆಯ ಪಾತ್ರಕ್ಕೆ ಆಯ್ಕೆ ಆದವೆ. ಒಂದ್ ಗಲಾಸ್ – ಎರ್ಡ್ ಗಲಾಸ್ ಜಂಕೋಳಿ ಕುಡ್ದವ್ ರಾಜಸಿಕ ಮತ್ತೆ ತಾಮಸಿಕ ಕಿಕ್ ಹೊಡ್ಸಿಕಂಡ್ ಕೆಟ್ಟ ಪಾತ್ರಗಳ್ಗೆ ಆಯ್ಕೆ ಆದವೆ. ಜಂಬರಲಿ ನೆಂಟ್‌ರಿಷ್ಟರ ಒಳ್ಳೆ ಕೆಟ್ಟ ಅವತಾರಗಳ್ಗೆ ಒಕ್ಲ್ ಯಜಮಾನ ಹೆಂಗೆ ಕಾರಣ ಅದುಲ್ಲೆಯೋ, ಹಂಗೆ ನೂರ್ ವರ್ಷದ ಸಿಲ್ಮ್‌ಲಿ ಜನಗಳ ಒಳ್ಳೆ ಕೆಟ್ಟ ಪಾತ್ರಗಳ ಆಯ್ಕೆಗೆ ದೇವ್ರ್ ಕಾರಣ ಆದುಲ್ಲೆ.

**ವೇದಾಂತ**

ಸಾತ್ವಿಕ, ರಾಜಸಿಕ ಮತ್ತೆ ತಾಮಸಿಕ ಗುಣಗ ನನ್ನೊಳಗೆ ಉಟ್ಟು, ನಾನ್ ಅದರ ಒಳಗೆ ಇಲ್ಲೆಂತ ಶ್ರೀಕೃಷ್ಣ ಪರಮಾತ್ಮ ಭಗವತ್ಗೀತೆಲಿ ಅರ್ಜುನಂಗೆ ಹೇಳ್ದೆ. ಅದ್ಕೆ ಸಾತ್ವಿಕ, ರಾಜಸಿಕ ಮತ್ತೆ ತಾಮಸಿಕ ಕಿಕ್ ಹೊಡ್ಸಿಕಂಡವರ ಹೊಟ್ಟೆ ಒಳ್ಗೆ ಪರಮಾತ್ಮ ಹೋಗುಟ್ಟೂಂತ ಹೇಳ್ರೆ ತಪ್ಪಾದೆಕಂಡದೆ!

**ಮನ್ಸ ಕೆಟ್ಟವ್ ಆಕೆ ಕಾರಣ ಅವರ ಹಿಂದೆದ್ ಜಲ್ಮ**

ನಾವ್ ಹುಟ್ಟಿಕನ ಪಿತ್ರಾರ್ಜಿತ ಹಣೆಬರನ ತಕಂಡ್ ಬಂದವೆ. ಪಿತ್ರಾರ್ಜಿತ ಹಣೆಬರತೇಳಿರೆ ಎಂತ? ನಾವ್ ಸಾಲೆಲಿ ಓದಿಕನ ಚಾರ್ಲ್ಸ್ ಡಾರ್ವಿನ್ ಹೇಳ್ದ ಮಂಗನಿಂದ ಮಾನವ ಸಂಗತಿ ಎಲ್ಲವ್‌ಕೂ ಗೊತ್ತುಟ್. ಮನ್ಸ ಪೂರ್ವ ಕಾಲಲಿ ದೊಡ್ಡ ಕಾಡ್ ಕಪಿ ಆಗಿತ್. ಕಪಿದ್ ಸೊಂಟ ನೆಟ್ಟಂಗಾಗಿ ಗೊರಿಲ್ಲ ಆತ್, ಗೊರಿಲ್ಲದ್ ರೋಮ ಉದುರಿ ಮನ್ಸ ಆತ್‌ತ ಹೇಳಿಯೋಳೊ. ಮನ್ಸ ಕಪಿ ಆಕಿಂತ ಮುಂದೆ ಗಿಡಮರಬಳ್ಳಿ, ಹುಳ-ಉಪ್ಪಟೆ, ಹಾವ್‌ಚೇಳ್, ಪ್ರಾಣಿಪಕ್ಷಿ ಎಲ್ಲಾ ಸೇರಿ ಎಂಬತ್ತನಾಲ್ಕ್ ಲಕ್ಷ ಜಲ್ಮ ಆಗಿದ್ದ ಸಂಗತಿ ಪದ್ಮ ಪುರಾಣಲಿ ಉಟ್ಟು. ಮನ್ಸನ ಪಿತ್ರಾರ್ಜಿತ ಹಣೆಬರಲಿ ಈ ಎಲ್ಲದರ ಬುದ್ದಿಗ ಇದ್ದವೆ. ಇದ್ ಒಂದ್ ತರ ಜಿಡ್ಡ್ ಇದ್ದಂಗೆ. ಇದ್ ಮನ್ಸ್‌ದ್ ಜಿಡ್ಡ್. ಮನ್ಸ್‌ದ್ ಜಿಡ್ಡ್‌ಲಿರ್ವ ಇರ್ವ ಹಾವು ಹದ್ದ್ ಹುಲಿ ಕರ್ಡಿ ಕಪಿ ಗೊರಿಲ್ಲ ಎಲ್ಲಾ ಎಂಬತ್ತನಾಲ್ಕ್ ಲಕ್ಷ ಪೂರ್ವಜರ್ ಸೇರಿಕಂಡ್ ಮನ್ಸನ ಸೊಯನ ಮಂಕ್ ಮರ್‍ಳ್ ಮಾಡ್ಸಿ ಒಂದ್ ಗಲಾಸ್ ಎರ್ಡ್ ಗಲಾಸ್ ಜಂಕೋಳಿ ಕುಡಿವಂಗೆ ಮಾಡಿಬುಟ್ಟವೆ. ಅದ್ಕೆ ನೂರ್ ವರ್ಷದ ಸಿಲ್ಮಲಿ ಒಳ್ಳೆ ಪಾತ್ರ ಮಾಡುವ ಆಸೆ ಇದ್ದರೂ ಈ ಮನ್ಸ್‌ದ್ ಜಿಡ್ಡ್‌ದ್ ದೆಸೆಂದ ಅಂತವ್ಕೆ ಕೆಟ್ಟ ಪಾತ್ರನೇ ಸಿಕ್ಕಿದೆ.

**ಮನ್ಸ್‌ದ್ ಜಿಡ್ಡ್‌ನ ಹೋಗ್‌ಸುದು**

ಮೈಲಿರ್‌ವ ಜಿಡ್ಡ್ ಮೀದರೆ ಹೋದೆ. ಮನ್ಸ್‌ಲಿರ್ವ ಜಿಡ್ಡ್ ಮೀದರೆ ಹೋದೆಯ? ಯಾರ್ ಅಜಮಿಳನ ತರ ಮನ್ಸ್‌ದ್ ಜಿಡ್ಡ್‌ನ ಸುದ್ದ ಮಾಡಿಕಂಡವೆಯೊ ಅಂತವ್ಕೆ ಮಾತ್ರ ಜಂಕೋಳಿ ಎಷ್ಟ್ ಕುಡಿಯಕುಂತೇಳುವ ತಿಳ್‌ವಳಿಕೆ ಬಂದದೆ. ಅವ್ ಮಾತ್ರ ಅರ್ದ ಗಲಾಸ್ ಜಂಕೋಳಿ ಕುಡ್ಕಂಡ್ ನೂರ್ ವರ್ಷದ ಸಿಲ್ಮಲಿ ಒಳ್ಳೆ ಪಾತ್ರನ ಪಡ್ಕಂಡವೆ.

**ಅಜಮಿಳನ ಕತೆ**

ಶ್ರೀ ಭಾಗವತ ಸುಧಾ ಸಾಗರಲಿ ಒಂದ್ ಕತೆ ಉಟ್ಟು. ಪೂರ್ವ ಕಾಲಲಿ ಅಜಮಿಳತ ಒಬ್ಬ ಜ್ಞಾನಿ ಇದ್ದದೆ. ಅವಂಗೆ ನಾರಾಯಣ ತೇಳುವ ಮಂಜ ಇದ್ದದೆ. ಅಜಮಿಳ ಕೆಟ್ಟ ಸವಾಸಲಿ ಬಿದ್ದ್ ಕಾಲಕ್ರಮೇಣ ಅಂವನ ಮನ್ಸ್‌ಲಿ ಜಿಡ್ಡ್‌ನ ತುಂಬಿಸ್ಕಣ್ತಾ ಬಂದದೆ. ಅಜಮಿಳನ ಮನ್ಸ್‌ದ್ ಜಿಡ್ಡ್ ಜಾಸ್ತಿ ಆಗ್ತಾ ಇರ್ದುನ್ನ ನೋಡಿ ಒಂದ್ ದಿನ ಯಮದೂತರ್ ಅಂವನ ನರ್ಕಕ್ಕೆ ಎಳ್ಕಂಡ್ ಪೋಯಿತೇಳಿ ಬಂದವೆ. ಅಜಮಿಳ ಹೆದ್ರಿ ನಾರಾಯಣ ನಾರಾಯಣತ ಮಂಜನ ಕರ್ದದೆ. ದೇವ್ರ್‌ದ್ ಹೆಸ್ರ್‌ಗೆ ಎಷ್ಟ್ ಬಲ ಉಟ್ಟೂಂತ ಹೇಳ್ರೆ, ನಾರಾಯಣ, ನಾರಾಯಣತ ಮಂಜನ ಕರ್ದರೂ, ಅದ್ ವಿಷ್ಣುದ್ ಹೆಸ್ರ್ ಆದರ್‌ಂದ ಅಜಮಿಳನ ಮನ್ಸ್‌ದ್ ಜಿಡ್ಡ್ ಹೋಗಿ ಮನ್ಸ್ ಸುದ್ದ ಆಗ್‌ಬುಟ್ಟದೆ! ಯಮದೂತರ್ ಬರಿಕೈಲಿ ವಾಪಾಸ್ ಹೋದವೆ.

**ವಿದ್ಯೆ**

ಅಜಮಿಳ ಎಷ್ಟೋ ವರ್ಷಂದ ತುಂಬಿಸಿಕಂಡಿದ್ದ ಮನ್ಸ್‌ದ್ ಜಿಡ್ಡ್, ದೇವ್ರ್ ಹೆಸ್ರ್ ಕರ್ದಂಗೆ ಒಂದೇ ಗಳಿಗೆಲಿ ಸುದ್ದ ಆತ್‌ತ ಹೇಳಿರೆ ಯಾರಿಗಾದರೂ ಸಂಶಯ ಬಾರದೆ ಇರ್ಕಿಲ್ಲೆ. ಸಾವಿರಾರ್ ವರ್ಷಂದ ತುಂಬಿಕಂಡಿದ್ದ ಕತ್ತಲೆನ ಒಂದ್ ದೀಪ ಒಂದೇ ಗಳಿಗೆಲಿ ಹೋಗ್ಸುವಂಗೆ, ಎಷ್ಟೋ ವರ್ಷಂದ ಇದ್ದ ಅಜಮಿಳನ ಮನ್ಸ್‌ದ್ ಜಿಡ್ಡ್ ಅಂವನ ಹತ್ರ ಇದ್ದ ದೀಪಂದ ಒಂದೇ ಗಳಿಗೆಲಿ ಸುದ್ದ ಆಗ್‌ಬುಡ್ತ್. ಅಂದರೆ ಅಜಮಿಳನ ಹತ್ರ ಇದ್ದ ಆ ದೀಪ ಯಾವುದ್? ಅದ್ ಬೇರೆಯಾವುದೂ ಅಲ್ಲ, ಅದೇ ವಿದ್ಯೆ – ಆಧ್ಯಾತ್ಮ ವಿದ್ಯೆ.

**ಪ್ರಾಣಿ ಪಕ್ಷಿಗಿಂತ ಮನ್ಸ ಜಲ್ಮ ಶ್ರೇಷ್ಠ**

ಚಳಿಲಿ ನಡ್ಗ್‌ತ್ತಾ ಇದ್ದ ನೆರೆಮನೆ ಅಜ್ಜಪ್ಪನ ಕೈ ಹಿಡ್ಕಂಡ ಚಾಮಿ ನಿದಾನಲಿ ನಡ್ಸಿಕಂಡ್ ಮನೆಗೆ ಮುಟ್ಸಿಕನ ಕೋಳಿ ಕೂಂಗಿತ್. ಗಂಟೆ ಎರ್ಡ್ ಆಗಿರ್ದೂಂತ ಗ್ಯಾನ ಮಾಡ್ದವಂಗೆ ಕೋಳಿ ಕೂಂಗಿದ್ ಕೇಳಿ ನಾಕ್ ಗಂಟೆ ಆದ್ ಗೊತ್ತಾತ್. ನಾಕ್ ಗಂಟೆ ಆಗುವ ಸೂಚನೆನ, ಐದ್ ಇಂದ್ರಿಯಗ ಇರ್ವ ಕೋಳಿ ಹೂಂಜಕ್ಕೆ ಕೊಡುವ ದೇವ್ರ್, ಆರ್ ಇಂದ್ರಿಯಗ ಇರ್ವ ಮನ್ಸಂಗೆ ಏನೆಲ್ಲಾ ಸೂಚನೆ ಕೊಡ್ತಾ ಇರ್ದು? ಚಾಮಿದ್ ಮನ್ಸ್‌ಲಿ ಈ ತರ ಆಲೋಚನೆ ಮಿಂಚ್ ತರ ಬಂದ್ ಹೋತ್!

**ಸಿಲ್ಮ ಮುಗ್ದದ್ ಅಲ್ಲ ಸುರು ಆದ್**

ಪೂರ್ವ ದಿಕ್ಕ್‌ಲಿ ಸೂರ್ಯ ಹುಟ್‌ತ್ತಿದ್ದಂಗೆ ಚಾಮಿದ್ ಮನ್ಸ್‌ಲಿ ಅಜಮಿಳನ ಹತ್ರ ಇದ್ದಂತ ದೀಪನ ಪಡ್ದ್ ಅದರ ಬೆಳ್ಕ್‌ಲಿ ದೇವ್ರ್‌ದ್ ಸೂಚನೆನ ಓದಿ ಒಂದ್ ಹೊಸ ಮನ್ಸ ಆಗುವ ಆಸೆ ಹುಟ್ಟಿತ್.

**ಶುಭಂ–ಎಲ್ಲವ್ಕೂ ಒಳ್ಳೆದಾಗಲಿ**

# ನಮ್ಮ ಬೇರ್ ಹುಡುಕಾಟಲಿ

**–ಪುತ್ತೂರು ಅನಂತರಾಜ ಗೌಡ**

**ಅಮರ ಸುಳ್ಯ ಸ್ವಾತಂತ್ರ ಸಮರ (ಕಲ್ಯಾಣಪ್ಪನ ಕಾಟಕಾಯಿ 1834–1837)**

15–3–1834 ರಂದ್ ಬ್ರಿಟಿಷರ್ ಕೊಡಗ್‌ನ ಅರಸ ಚಿಕ್ಕವೀರರಾಜನ ಪದಚ್ಯುತಗೊಳ್ಸಿ, ಕೊಡಗ್‌ನ ಬೇರೆ ಬೇರೆ ಮಾಡಿ ಕೊಡಗ್‌ನ ಭಾಗ ಆಗಿದ್ದ ಪುತ್ತೂರು ಮತ್ತೆ ಅಮರ ಸುಳ್ಯ ಮಾಗಣೆನ ದಕ್ಷಿಣ ಕನ್ನಡಕ್ಕೆ ಸೇರ್‍ಸಿ ರೈತರ ಕಂದಾಯನ ಹೆಚ್ಚ್ ಮಾಡಿ ಹಣದ ರೂಪಲಿ ಸರಕಾರದ ತಿಜೋರಿಗೆ ಸಂದಾಯ ಆಗುವಂಗೆ, ಹೊಗೆ ಸೊಪ್ಪು, ಉಪ್ಪು ಹಿಂಗೆ ಬೇರೆ ಬೇರೆ ದಿನ ನಿತ್ಯ ಬಳಕೆಯ ವಸ್ತುಗಳ್ಗೆ ದಂಡ ಹಾಕಿದೊ. ಅದಲ್ಲದೆ ರೈತ ಮತ್ತೆ ಸರಕಾರದ ಮಧ್ಯೆ ದಲ್ಲಾಳಿಗ ಹುಟ್ಟಿಕಂಡ್ ರೈತಾಪಿ ಜನ ಸುಮಾರ್ ಕಷ್ಟಕಾರ್ಪಣ್ಯಗಳ ಎದುರಿಸಿಕಾತ್. ಹಳೆ ಪದ್ದತಿಂದ ಹೊಸ ಪದ್ಧತಿಗೆ ಅನುಸರ್‍ಸಿಕಣಿಕೆ ಅಸಾಧ್ಯ ಆತ್. ತಮ್ಮ ಹಳೆಯ ಪದ್ಧತಿನ ಹಂಗೆ ರಾಜವಂಶನ ಉಳ್ಸಿಕಣೋ ಪ್ರಯತ್ನಗ 1834 ರ್‌ಂದ 1837 ರ ಮುಟ್ಟ ನಡ್ತ್. ಕ್ರಿ.ಶ. 1837 ರ್‍ಲಿ ಅದ್ ಕ್ರಾಂತಿಯ ರೂಪಲಿ ಕಾಣ್ಸಿಕಂಡತ್.

ಆಗಿನ ಕಾಲಲಿ ರಾಜಭಕ್ತಿ ಜನಸಾಮಾನ್ಯರ್‍ಲಿ ಬಾಳಷ್ಟಿತ್ತ್. ದಂಗೆಯ ಸೂತ್ರನಧಾರಿಗ ಇದನ್ನ ತಮ್ಮ ಅನುಕೂಲಕ್ಕೆ ಬಳ್ಸಿಕಂಡೊ. ಸುಳ್ಯದ ಹತ್ರ ಉಬರಡ್ಕ– ಮಿತ್ತೂರ್‍ನ ಪ್ರಭಾವಿ ರೈತ ಮುಖಂಡ ಕೆದಂಬಾಡಿ ರಾಮಗೌಡನ ಮುಂದಾಳತ್ವಲಿ ಶನಿವಾಸಂತೆಯ ಪುಟ್ಟ ಬಸವ ತೇಳೋ ಜಂಗಮನ ಕಲ್ಯಾಣ ಸ್ವಾಮಿ ತಾ ನಾಮಕರಣ ಮಾಡಿ ಅಪ್ಪಾಜಿ ರಾಜನ ಎರಡನೇ ಮಂಞ ತಾ, ಕೊಡಗು ಸಿಂಹಾಸನಕ್ಕೆ ವಾರಸುದಾರ ತಾ ಸೂಚಿಸಿಯೊಳೊ.' ಮಾರ್ಚ್ 30 ರ 1837 ರಂದ್ ಬೆಳ್ಳಾರೆಲಿ 2000 ಸಶಸ್ತ್ರ ಸೈನಿಕರ್‍ನ ಕೆದಂಬಾಡಿ ರಾಮಗೌಡರು ಸೇರ್‍ಸಿ ಬ್ರಿಟಿಷ್ ಖಜಾನೆನ ವಶಪಡ್ಸಿಕಂಡವೆ. ಅದೇ ದಿನ 200 ಸೈನಿಕರ ತಂಡ ಕುಂಚಡ್ಕ ತಿಮ್ಮ ಮತ್ತೆ ಕುಡೆಕಲ್ಲು ಪುಟ್ಟ ಅವರ ಮುಂದಾಳತ್ವಲಿ ಕಾಸರಗೋಡ್‌ಗೆ ಹೋಗಿ ಏಪ್ರಿಲ್ 2 ರಂದ್ ಕಾಸರಗೋಡು, 3 ರಂದ್ ಕುಂಬ್ಳೆ, 4 ರಂದ್ ಮಂಜೇಶ್ವರನ ವಶಕ್ಕೆ ತಕಂಡವೆ.

ಮಾರ್ಚ್ 30 ರಂದ್ 200 ಸೈನಿಕರ ಇನ್ನೊಂದ್ ತಂಡ ಗುಡ್ಡೆಮನೆ ಅಪ್ಪಯ್ಯಗೌಡರ ನೇತೃತ್ವಲಿ ಬಿಸ್ಲೆ ದಾರಿಂದ ಮಡಿಕೇರಿ ಕಡೆ ಹೊರ್‍ಟವೆ. ದಾರಿಲಿ ಸಿಕ್ಕಿದ ಎಲ್ಲಾ ಸರಕಾರಿ ಕಛೇರಿಗಳ್ನ, ಖಜಾನೆಗಳ್ನ ವಶಪಡ್ಸಿಕಂಡ್ ತಮ್ಮ ಕಡೆನ ಅಧಿಕಾರಿಗಳ್ನ ಅಲ್ಲಿಗೆ ನೇಮಿಸಿಕಂಡ್ ಮುಂದುವರ್‍ದವೆ.

ಕಲ್ಯಾಣಪ್ಪ ಮತ್ತೆ ಕೆದಂಬಾಡಿ ರಾಮಗೌಡನ ನೇತೃತದ ಸುಮಾರ್ 1200 ಕ್ಕೂ ಹೆಚ್ಚ್‌ನ ಸಶಸ್ತ್ರ ಜನ ಮಾರ್ಚ್ 31 ಕ್ಕೆ ಪುತ್ತೂರ್‍ನ ಖಜಾನೆನ ವಶಪಡ್ಸಿಕಂಡ ಪ್ರಯುಕ್ತ ಅಲ್ಲಿದ್ದ ಬ್ರಿಟಿಷ್ ಅಧಿಕಾರಿಗ ಓಡಿ ಹೋದವೆ. 1837 ರ ಏಪ್ರಿಲ್ 5 ರಂದ್ ಮಂಗಳೂರು ತಲ್ಪಿದ ಸ್ವಾತಂತ್ರ್ಯ ಹೋರಾಟಗಾರರ್ ಏಪ್ರಿಲ್ 5 ರಂದ್ ಬಾವುಟಗುಡ್ಡಲಿ ಹಾರಾಡಿಕಂಡ್ ಇದ್ದ ಬ್ರಿಟಿಷ್ ಧ್ವಜನ ಕಿತ್ತ್ ಬಿಸಾಕಿ ತಮ್ಮ ಧ್ವಜನ ಅಲ್ಲಿ ಹಾರ್‍ಸುವೆ. ಖೈದಿಗಳ ಬಿಡುಗಡೆ ಮಾಡಿ 13 ದಿನ ಮಂಗಳೂರ್‍ನ ರಾಜ್ಯಭಾರ ಮಾಡುವೆ. ಆದ್ರೆ ಈ ಜಯ ಹೆಚ್ಚ್ ಹೊತ್ತ್ ಇತ್ಲೆ. ಬ್ರಿಟಿಷ್ ಪಡೆಗ ಕಲ್ಲಿಕೋಟೆ, ಬೆಂಗಳೂರು ಮತ್ತೆ ಬೊಂಬಾಯಿಂದ ಬಂದ್ ಇವರ್‍ನ ಸದೆ ಬಡೆಯುವಲ್ಲಿ ಯಶಸ್ವಿ ಆದವೆ. ಸಾವಿರಾರ್ ಹೋರಾಟಗಾರರ್ ನಡ್ದ ಕದನಲಿ ಸತ್ತವೆ.

ಇತ್ತ ಬಿಸಿಲೆ ಘಾಟಿ ಕಡೆಂದ ಹೊರ್‍ಟಿದ್ದ ಗುಡ್ಡೆಮನೆ ಅಪ್ಪಯ್ಯ, ನಾಲ್ಕನಾಡ್ ಉತ್ತು, ಶಾಂತಳ್ಳಿ ಮಲ್ಲಯ್ಯನವ್ರ ನೇತೃತ್ವಲಿ ಬಂಡಾಯಗಾರರ ಸೈನ್ಯ ಕೊಡಗ್‌ನ ಜನರ್‍ನ ಹುರಿದುಂಬಿಸಿಕಂಡ್ ಮಡಿಕೇರಿ ಕೋಟೆನ 16 ನೇ ಏಪ್ರಿಲ್ 1837 ರಂದ್ ಮುತ್ತಿಗೆ ಹಾಕುದು ತಾ ತೀರ್ಮಾನಿಸಿದೊ. ಆದ್ರೆ ಬ್ರಿಟಿಷರ್‍ಗೆ ವಿಧೇಯರಾದ ಸುಬೇಧಾರ ಮಾದಯ್ಯ, ಅಪ್ಪಾರಂಡ ಬೋಪು ದಿವಾನರ ಕುಟಿಲ ತಂತ್ರಂದಾಗಿ ಗುಡ್ಡೆಮನೆ ಅಪ್ಪಯ್ಯಗೌಡ ಮತ್ತೆ ಅವರ ಒಟ್ಟಿಗೆ ಇದ್ದವರ್‍ನ ಬಂಧಿಸಿ ಮಡಿಕೇರಿ ಕೋಟೆಯ ಪೂರ್ವ ಭಾಗಲಿ ತಾ: 31–10–1837 ರಂದ್ ಎಲ್ಲರ ಮುಂದೆ ಗಲ್ಲಿಗೆ ಹಾಕಿದೊ.

ಏಪ್ರಿಲ್ 26–29 ರ ಒಳಗೆ ಕ್ಯಾಪ್ಟನ್ ಲೀ ಹಾರ್ಡಿ ಅಪ್ಪಾರಂಡ ಬೋಪು ದಿವಾನ ಹಂಗೆ ಇನ್ನ್ ಬೇರೆ ಕೊಡವ ವಿಧೇಯಕರ ಸಹಾಯಂದ ಬಂಡಾನ ಸಂಪೂರ್ಣವಾಗಿ ಹತ್ತಿಕ್ಕಿದೊ. ಅಮರ ಸುಳ್ಯ ಮತ್ತೆ ಪುತ್ತೂರು ಮಾಗಣೆಗಳ್ನ ಕೊಡಗ್‌ಂದ ಬೇರೆ ಮಾಡಿ ದಕ್ಷಿಣ ಕನ್ನಡಕ್ಕೆ ಸೇರ್‍ಸಿದೊ.

ಗೌಡರ್ 1837 ರ ಬ್ರಿಟಿಷ್ ವಿರುದ್ದದ ಸಂಗ್ರಾಮಲಿ ಸೋತು ಸರಕಾರಂದನೂ ಹಂಗೆ ಇತರ ಪ್ರಬಲ ಕೋಮಿನಿಂದಲೂ ಬಾಳಷ್ಟ್ ತೊಂದರೆಗಳ್ನ ಅನುಭವಿಸಬೇಕಾತ್. ಪುತ್ತೂರು, ವಿಟ್ಲ ಕಡೆನ ಗೌಡರ್ ತಮ್ಮ ಜಾಗನ ಕಳ್ಕಂಡ್ ಅದೇ ಭೂಮಿಗೆ ಒಕ್ಕಲುಗಳಾದೊ. ಈ ಹೊಡ್ತಂದ ಮೇಲೆ ಬಾಕೆ ಸುಮಾರ್ ಒಂದು ಶತಮಾನಕ್ಕಿಂತ ಹೆಚ್ಚ್ ಬೇಕಾತ್. ಈಗಿನ ಜನಾಂಗ ವಿದ್ಯಾಭ್ಯಾಸಲಿ ಮುಂದುವರ್‍ದ್ ಜೀವನದ ಮೆಟ್ಟಲ್‌ನ ಹಂತ ಹಂತವಾಗಿ ಏರುವ ಪ್ರಯತ್ನನ ಮುಂದುವರೆಸಿಯೊಳೊ. ಮೂಲತಃ ಕೃಷಿಕರಾದ ಇವು ಶಾಲಾ ಮೇಷ್ಟ್ರು, ನ್ಯಾಯವಾದಿಗ, ಸರಕಾರಿ ಹಂಗೆ ಖಾಸಗಿ ವಿಭಾಗಗಳ್ಲಿ ಉದ್ಯೋಗ ಕಂಡ್ ಕಂಡೊಳೊ. ಪ್ರಪಂಚದ ಎಲ್ಲಾ ಮೂಲೆ ಮೂಲೆಗಳ್ಲಿ ನೆಲೆನಿಂತೊಳೊ. ಉದ್ಯೋಗಿಗಳ್‌ಂದ ಮುಂದಕ್ಕೆ ಉದ್ಯಮಿಗಳಾಗಿ ಪರಿವರ್ತನೆ ದಾರಿಲಿ ಸಾಗಕು.

**–ಈ ಸಂಚಿಕೆಗೆ ಮುಗ್ತ್.**

# ಹುಡ್ಗಾಟದ ಹುಡ್ಕಾಟ

–ಡಾ. ಪುನೀತ್ ರಾಘವೇಂದ್ರ ಕುಂಟುಕಾಡು

ಆ ಪ್ರಾಯನೇ ಹಂಗೆ... ಆಗಷ್ಟೇ ಪಿಯುಸಿ ಮುಗ್ಸಿ ದೊಡ್ಡ ಕಾಲೇಜ್‌ಗೆ ಸೇರಿದ್ದವೆ. ಕ್ಲಾಸ್‌ಲಿ ಇದ್ದರೂ ಇಲ್ಲದಿದ್ದರೂ, ಲೆಕ್ಚರ್ ಮಾಡ್ದ ಪಾಠ ಕೇಳ್ರೂ ಕೇಳದಿದ್ದರೂ ಹೇಳಂವ ಕೇಳಂವ ಯಾರೂ ಇರ್ದುಲೆ. ಎಷ್ಟೇ ಗೂಡೆಗಳ ನೋಡ್ರೂ ಮನ್ಸ್‌ಗೆ ಬಿಡ್ದ್ ಹೋತ್ ಅನ್ಸಿಕೇಲೆ. ಗ್ಲಾಸ್‌ಲಿ ಅಲ್ಲದಿದ್ದರೆ ಗೊಟ್ಟೆಲಿ ಕುಡ್ಸುವಾಂಗೆ ಕದ್ದ್ ಕದ್ದ್ ನೋಡಿಕಾಂಡಿದ್ದವೆ. ಇನ್ನ್ ಹಾಸ್ಟೆಲ್ ಲಿ ಇದ್ದರೆ ಅಂತೂ ಕೇಳಂಕೂಂತಲೇ ಇಲ್ಲೆ. ಅಪ್ಪನ ಬೊಯ್ಗಳಿಲ್ಲೆ. ಅಮ್ಮನ ಪರ್ರ್‌ಂಚಟ ಇಲ್ಲೆ!! (ಎಷ್ಟೋ ಸಲ ಅನ್ಸಿದೆ.. ಮೊನ್ಸ ಆಗಿ ಹುಟ್ಟಿದ ಮೇಲೆ ಒಮ್ಮೆಯಾರ್ ಹಾಸ್ಟೆಲ್ ಲೈಫ್‌ನ ಮಜಾ ಅನ್ಭವ್ಸಿಯೇ ಅನ್ಭವ್ಸೊಕು!!) ಹಿಂಗಿರ್‍ಕಾಕನನೇ ನಮ್ಮ ತಲೆಗೆ ಎಂತ ಹೊಳ್ದರೂ "ಸಂಶೋಧನೆ" ಮಾಡೊನೊ ಎಂಬ ಸಣ್ಣ ಧೈರ್ಯ "ಹುಡ್ಗಾಟ"ದ ಮನ್ಸ್‌ಗೆ ಹೊಳಿದು. ಹಂಗೇ ಹಾಸ್ಟೆಲ್ ಹಿಂದೆ ಮರಲಿ ಗ್ಯಾರ್ದಣ್ಣ್ ನೋಡ್ತಾಕನನೇ ನನ್ನ ತಲೆಗೂ ಹೊಳ್ತ್.. ಎಂತ?? ಬೀಜದಣ್ಣ್ ಹೇಳ್ರೇ ನೀವ್ಗೂ ಹೊಳ್ದಿರ್ದಲ್ಲಾ?? ಅದೇ.. ಅದೇ.. ಒಮ್ಮೆ "ಗ್ಯಾರ್ದಣ್ಣ್" ದರ ಕಾಸಿ ನೋಡೊನೋಂತ!!!

ಆದ್ರೆ ಕಾಸುದು ಹೇಂಗೆ?? ಸಣ್ಣದರ್ಲಿ ಬೀಜದಣ್ಣ್ ಸಿಗ್ದ್ ಹಾಕುದರ ನೋಡಿ ಗೊತ್ತುತ್ತಷ್ಟೇ ಬುಟ್ಟು ಕಾಸುದರ ನೋಡಿಯೇ ಗೊತ್ತೆ!! ಪ್ರೈಮರಿ ಶಾಲೆಲಿ ವಿಜ್ಞಾನಲಿ ಜಾರ್ಜ್ ಮಾಷ್ಟ್ರ "ನೀರಿನ ಭಾಷ್ಪೀಭವನ/ ಭಟ್ಟಿ ಇಳಿಸುವಿಕೆ ಅಂದರೆ ಅದೇ ಮಾರಾಯ" ಹೇಳ್ದ್ ನೆನ್ಪಾತ್. ಆದರೂ ಯಾರೊಟ್ಟಿಗೇಂತ ಕೇಳ್ದು. ಕೊಡ್ಪಾಣಲಿ ಚಿಪ್ಪಿ ಇಸಿ ಕಾಸಿಕಣ್ತಿದ್ದ ದೊಡ್ಡಪ್ಪನೊಟ್ಟಿಗೆ ಕೇಳ್ರೆ ಆಕಿಲೆ. ಯಾರಿಗೂ ಗೊತ್ತಾಂಗದಾಂಗೆ ಪುಂಡಿಪಾತ್ರೆಲಿ ಕಾಸಿಕಂಬಂತಿದ್ದ ದೊಡ್ಡಮ್ಮನೊಟ್ಟಿಗೆ ಕೇಳ್ರೆ ಮಾಯಿಪುನ ಸುಡಿಲೇ ಸಿಕ್ಕುದು. ಇನ್ನ್ ಡ್ರಮ್ ಗಟ್ಟಲೆ ಕಾಸಿಸಿಕಂಬತಿದ್ದ ಮಾವನೊಟ್ಟಿಗೆ ಕೇಳ್ರೆ ಗ್ರಾಚಾರನೇ ಬುಡ್ಸ್‌ವೊ. ಅಷ್ಟೊತ್ತಿಗೆ ಕುರೆನೊಟ್ಟಿಗೆ ಇರುವ ಕೊರುಂಬನಾಂಗೆ ನನ್ನ ಎಲ್ಲಾ "ಮಹಾತ್ಕಾರ್ಯ"ಗಳ್ಗೆ ಒಟ್ಟಿಗೆ ಇರುವ ದೋಸ್ತಿ "ಎಂಪಿ" ನ ನೆನ್ಪಾತ್. (ಮನೆಂವ್ ಎಷ್ಟೇ ಲಾಯಿಕ್‌ನ ಹೆಸ್ರಿಸಿರೂ ನಾವು ಕರಿದು 'ಕುಂಞಿ' ಹೆಸ್ರ್‌ಲೇ ಅಲ್ಲ) ನಾವಿಬ್ಬರೂ ಕ್ಲಾಸ್ ಬೇರೆ ಬೇರೆ ಆದರೂ ಒಂದೇ ಊರವ್ ಆದರ್‌ಂದ ಬೆಸ್ಟ್ ಜೋಡಿ. ಇಬ್ಬರೂ ಸೇರಿ, ಡಿಸ್ಕಸ್ ಮಾಡಿ "ಕಾಸುವ ಪ್ಲಾನ್" ರೆಡಿ ಮಾಡ್ದೊ.

ಬೊಳ್ಪುಗೇ ಹೋಗಿ ಸುಮಾರ್ ಬೀಜಣ್ಣ್ ಹೆಕ್ಕ್ಯಂಡ್ ಬಾಕನ ದಾರಿಲಿ ಸಿಕ್ಕಿದ ಗೂಡೆಗಳಿಗೆ ತಿಂಬಕೆ ಆಸೆ ಆದೇಂತ ಸುಳ್ಳು ಬೇರೆ ಬುಟ್ಟೊ. ಹಣ್ಣ್‌ನ ಸಿಗ್ದ್ ಒಂದ್ ಪಾತ್ರೆಲಿ ಹಾಕಿ ಮಂಚದಡಿಲಿ ಅಣ್‌ಂಗಿಸಿ ಇಸಿದೊ. (ವಾರ್ಡನ್‌ಗೆ ಗೊತ್ತಾಕೆ ಬೊತ್ತಲ್ಲ!!) ಈಗ ನೋಡಿ ಹೊಸ ತಲೆಬಿಸಿ.. ಕಾಸುದೆಂತದರ್ಲಿ?? ಅದ್ಕೂ ಎಂಪಿ ಒಂದು ಉಪಾಯ ಕೊಟ್ಟತ್. ಕೆಮಿಸ್ಟ್ರಿ ಲ್ಯಾಬ್‌ಂದ "ದುಂಡು ತಳದ ಫ್ಲಾಸ್ಕ್" ಹಾರ್ಸಿದೊ. ಒಟ್ಟಿಗೆ ಒಂದು ಬಿರಡೆ/ಕಾರ್ಕ್ ಮತ್ತೆ ಟ್ಯೂಬ್!! ಸರಿ.. ಒಂದು ವಾರ ಕಳ್ದ್ ಶನಿವಾರ "ಕಾಸುವ ದಿನ" ಬಾತ್. (ಶನಿವಾರ ಯಾಕೆಂತೇಳ್ರೆ ವಾರ್ಡನ್ ಮನೆಗೋದವೆ) ಇಡೀ ಹಾಸ್ಟೆಲ್ ಮಲ್ಗಿದ ಮೇಲೆ ಕತ್ತಲೆಗೆ 12 ಘಂಟೆಗೆ "ಕಾಸುವ ಕಾರ್ಯ" ಕ್ಕೆ ರೆಡೀ ಆದೊ. ನಮ್ಮ ಈ "ಹುಡ್ಕಾಟ"ಕ್ಕೆ ನಡುರಾತ್ರಿ ಅದ್ಯಾವ ಕೊಲೆ, ಪೀಡೆ ಕಣ್ಣ್ ಮುಟ್ಸ್‌ಸಿತ್ತೋ ಏನೋ.. ಕಾಸಿಕೆ ಕಿಚ್ಚಿ ಇಲ್ಲೆ!! "ಆಪದ್ಬಾಂದವ ಐರನ್ ಬಾಕ್ಸ್" ಮೇಜದ ಮೂಲೆಲಿ ಕುದ್ದು ನೆಗಾಡ್ ತುಟ್ಟು. ಇಸ್ತ್ರಿ ಪೆಟ್ಟಿಗೆನನೇ ಅಡ್ಡ ಹಾಕಿ ಫ್ಲಾಸ್ಕ್‌ನ ಅದರ ಮೇಲೆ ಇಸಿ ಕಾಸಿಕೆ ಸುರು ಮಾಡ್ದೊ. (ಇಸ್ತ್ರಿ ಪೆಟ್ಟಿಗೆಗೆ ಆಮ್ಲೆಟ್ ಹೊಯ್ದ್ ಹೊಯ್ದ್ ಅಭ್ಯಾಸ ಆದದ್ರಂದ ಹೆದ್ರಿಕಂಡಿರಿಕಿಲೆ!!) ಅಂತೂ ಫ್ಲಾಸ್ಕ್‌ಲಿ ಇದ್ದದ್ ಕೊದ್ದ್ ಕೊದ್ದ್ ಕರೆಲಿದ್ದ ಸಣ್ಣ ಕುಪ್ಪಿಲಿ ಒಂದು ಕೊಂಡೆನಷ್ಟ್ ತುಂಬಿತ್. ನಾವ್ಗೋ.. ಪ್ರಪೋಸ್ ಮಾಡಿಕೆ ಹೋಕನ ಗೂಡೆನೇ ಬಂದ್ "ಐ ಲವ್ ಯೂ" ಹೇಳ್ದಷ್ಟ್ ಖುಷಿ. ಕಾಸಿದ ಮೇಲೆ ರುಚಿ ನೋಡದಿದ್ದರೆ ಆದೋ? ಹುಟ್ಟಿದಲ್ಲಿಂದಿತ್ತ ಕಂಡವರೆಲ್ಲಾ ಮನ್ಸ್ ಲೇ ನೆನ್ಸಿದ್ ಒಂದ್ ತುಂಡ್ ನೆಕ್ಕರೆ ಉಪ್ಪನಕಾಯ್ ನೂ ನೆಕ್ಯಂಡ್ ಚೂರ್ ಚೂರ್ ಹೊಯಿಕಂಡೊ.. ಯಪ್ಪಾ.. ಕಂಯಿ ಕರ್ಪಟೆ!! ಕರ್‌ಂಚಿದ ವಾಸನೆ ಬೇರೆ!! ಇದರ ಹೆಂಗಪ್ಪಾ ಕುಡ್ದವೇಂತ ಕಾಸವಂಗ, ಕುಡಿಯವಂಗೆ, ಕಾಸುದರ ಕಂಡ್ ಹುಡ್ಕಿದವಂಗೂ ಶಾಪ ಹಾಕ್ಯಂಡ್ ಫ್ಲಾಸ್ಕ್‌ನ ಲಾಯಿಕ್ ತಿಳ್ದಿಸಿದೊ. (ನಾಳ್ದ್ ಪುನಃ ಲ್ಯಾಬ್‌ಲಿ ಇಸೊಕು.. ಇಲ್ಲರೆ "ಕಾಣೆಯಾಗಿದೆ" ಸುದ್ದಿ ಬಾದು). ಕಾದ್ ಕಾದ್ ಹೊತ್ತಿ ಹೋದ ಇಸ್ತ್ರಿ ಪೆಟ್ಟಿಗೆ ನಮ್ಮ ನೋಡಿ ಒರ್‌ಂಗುಸಿ ನೆಗಾಡ್ ತಿತ್ತ್!!

# ಹಳಬರ ಜೋಳಿಗೆ

ಶ್ರೀಮತಿ ಜಯಮ್ಮ ಚೆಟ್ಟಿಮಾಡ ಅರೆಬಾಸೆ, ತುಳು ಹಂಗೆ ಕನ್ನಡ ಬಾಸೆಲಿ ಪ್ರಬುದ್ಧತೆನ ಪಡ್ದ ತ್ರಿಬಾಷಾ ಸಾಹಿತಿ. ಇವು ಇಲ್ಲಿಮುಟ್ಟ ಪುರುಷಾರ್ಥ ಸಾಧಕರು, ಕೈ ಮರ, ತನನ ದಿನನ, ಲಹರಿ, ಹನಿ ಹೊನಲು, ಕಾಡುಮೇಡಿನ ಜಾಡು, ಕತ್ತಲೆಯೊಳಗಿನ ಕಿಡಿ, ಪೂರಿಯ ಮರ ಮತ್ತು ಅಳಿಲಮ್ಮ, ನೂರೆಂಟು ಹನಿ ಹನಿಗಳು, ಪರಬಾಳ್‌ತ ಪರಪಾಳೆಳ್, ಅರಿವನರುಹಿದ ಎನ್ನ ಗುರು "ಯನ್ನಾರ್", ಹಳೆ ಬಾಳ್‌ನ ಹರ್ದ ಹಾಳೆಗ ಹಂಗೆ ಒಂದರಿಂದ ಏಳರ ಮುಟ್ಟ 'ಹಳಬರ ಜೋಳಿಗೆ' ಸಂಚಿಕೆ.

ತಮ್ಮದೇ ಆದ ಸಂಜೀವಿನಿ ಪ್ರಕಾಶನಲಿ ಸಂಪಾದಕಿ ಹಂಗೆ ಪ್ರಕಾಶಕಿ ಆದ ಇವು ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆನ ನೀಡಿಯೊಳೊ. ವೃತ್ತಿಲಿ ಶಿಕ್ಷಕಿ ಆಗಿದ್ದ ಇವ್ ನಿವೃತ್ತಿ ನಂತರ ಸಾಹಿತ್ಯ ಸೇವೆಲಿ ತಮ್ಮನ್ನ ತೊಡಿಗಿಸಿಕಂಡೊಳೊ. ಅವರ ಹಳಬರ ಜೋಳಿಗೆ ಪುಸ್ತಕ ಮಾಲೆಯ ಕೆಲವ್ ಆಯ್ದ ಲೇಖನಗಳ್ನ ನಮ್ಮ ಪತ್ರಿಕೆಲಿ ನೀವ್ಗಾಗಿ ಪ್ರಕಟಿಸ್ತಾ ಒಳೊ.

**ಕುಪ್ಪುಳು ತರ್ವ ಸಂಜೀವಿನಿ ಕಡ್ಡಿ**

**ಕತೆ ಕೊಟ್ಟವ್:**

ಇಪ್ಪತ್ತೈದ್ ವರ್ಸಗಳ ಹಿಂದೆ ತೊಂಬತ್ತಮೂರರ ಹರಯದ ಅಕ್ಕಮ್ಮಜ್ಜಿ ಹೇಳ್ತಾ ಇದ್ದ ಐಹಿತ್ಯ ಇದ್.

ಅದ್ ಕುಪ್ಪಳು (ಕೆಂಬೂತ, ಭಾರಧ್ವಾಜ) ಹಕ್ಕಿನ ಬಗ್ಗೆ ಮನೆಯ ಚಿಂಟೆಲಿ ಕುದ್ದ್‌ಕಂಡ್, "ನೀನ್ ಎಲ್ಲಿಯಾರ್ ಕುಪ್ಪುಳು ಹಕ್ಕಿನ ಗೂಡ್‌ನ ನೋಡ್ತ್ಯೊಳಾ ರಾಮಣ್ಣಾ?" ತಾ ಜುಟ್ಟು ರಾಮಣ್ಣನ ಪ್ರಶ್ನಿಸಿ ಅದರ ಮುಂದಿನ ಭಾಗ ಆಗಿ " ಅದ್ ಹಂಗೆ ಹಿಂಗೆ, ಯಾರಿಗೆ ಸ ಕಾಂಬಕೆ ಸಿಕ್ಕುಲೆ. ಅದೃಷ್ಟ ಇದ್ದವ್ಕೆ  ಮಾತ್ರ ಕಾಂಬದು. ಬೇರೆ ಹಕ್ಕಿಗಳ ಗೂಡು ಕಂಡದೆ, ಆದ್ರೆ ಇದರ್ದ್ ಕಾಂಬಕೆ ಸಿಕ್ಕಿದೆನ? ಕುಪ್ಪುಳನ ಗೂಡ್‌ನ ಒಮ್ಮೆ ತೋರ್ಸ್ ನೋಡ್ನೋ.. ತಾ ಕುಪ್ಪಳನ ಕಂಡಂಗೆಲ್ಲಾ ಸವಾಲ್ ಹಾಕ್ತಿದ್ದೋ ಅಕ್ಕಮ್ಮಜ್ಜಿ. "ಹೌದಲಾ, ಕುಪ್ಪುಳನ ಗೂಡು ನೋಡ್ತೇಲೆ.. ಅದ್ಯಾಕೆ ಕುಪ್ಪುಳದ ಗೂಡು ಕಾಂಬಲೆ. ಅದರ್ಲಿ ಅದೇನ್ ಅದೃಷ್ಟ ಉಟ್ಟು? ಈ ಪ್ರಶ್ನೆಗೆ ಸ್ವಾರಸ್ಯಕರವಾದ ಉತ್ತರ ಅಕ್ಕಮ್ಮಜ್ಜಿ ಹತ್ರ ಇತ್ತ್. ಅದ್ನ ಅತ್ಯಂತ ರೋಚಕವಾಗಿ ಬಿಚ್ಚಿಟ್ಟೊ.

ಎಲ್ಲಿಯಾರ್ ಕುಪ್ಪುಳದ ಗೂಡುನ ಕಂಡರೆ ಅದ್ ಅಲ್ಲಿ ಮೊಟ್ಟೆ ಇಸಿಕೆ ಮುಟ್ಟ ಕಾಯಕು. ಮೊಟ್ಟೆ ಇಟ್ಟಾದ ಮೇಲೆ ಅದರ್‌ಂದ ಒಂದು ಮೊಟ್ಟೆನ ಹಕ್ಕಿಯ ಕಣ್ಣ್ ತಪ್ಸಿ ತರಕು. ಹಂಗೆ ತಂದ ಮೊಟ್ಟೆನ ಲಾಯ್ಕಲಿ ಬೇಯ್ಸಿ ಮತ್ತೆ ಅದೇ ಗೂಡ್‌ಲಿ ಇಡಕು. ಕುಪ್ಪುಳು ಎಲ್ಲಾ ಮೊಟ್ಟೆಗೆ ಕಾವು ಕೊಟ್ಟು ಮರಿ ಮಾಡ್ದೆ ಆದ್ರೆ ಬೇಯಿಸಿದ ಮೊಟ್ಟೆಂದ ಮರಿ ಬಾದುಲೆ. ಮೊಟ್ಟೆ ಹಾಳಾಗಿ ನಿರ್ಜೀವ ಆವ್ದು ತಾ ತಾಯಿ ಕುಪ್ಪುಳುಗೆ ಗೊತ್ತಾದೆ. ಅದ್ ತಕ್ಷಣ ಚುರುಕು ಆದೆ. ಏಳು ಸಮುದ್ರದಾಚೆಗೆ ಹಾರ್ದೆ. ಅಲ್ಲಿಂದ ಒಂದು ಕಡ್ಡಿ ತಂದದೆ. ಆ ಕಡ್ಡಿನ ಮೊಟ್ಟೆಗೆ ತಾಂಗಿಸಿ ಅದನ್ನ ಸಜೀವಗೊಳ್ಸಿದೆ. ಮೊಟ್ಟೆಂದ ಮರಿ ಹೊರ ಬಂದದೆ. ಈ ಕೆಲ್ಸ ಆದ ಮೇಲೆ ಅದ್ ತಂದ ಕಡ್ಡಿನ ಕುಪ್ಪುಳು ಗೂಡ್‌ಲೇ ಬುಟ್ಟುಹೋದೆ.

ಈ ಮರಿಗ ಬೆಳೆಯುವ ಹಂತಲಿ ಮತ್ತೆ ಒಮ್ಮೆ ನೋಡಿಕಣಕು. ಮರಿಗಳ್ಲಿ ಒಂದು ಮರಿನನ ಹಿಡ್ದ್ ಅದರ ಕಾಲಿಗೆ ಕಬ್ಬಿಣದ ತಂತಿನ ಬಿಗ್ದ್ ಕಟ್ಟಕು. ಆಗ ಎಲ್ಲಾ ಮರಿಗ ಹಾರಿಕೆ ಸುರು ಮಾಡ್ರೂ ಈ ಮರಿ ಮಾತ್ರ ಹಾರಿಕೆ ಆಗದೆ ಅಲ್ಲೇ ಉಳ್ದದೆ. ತಾಯಿ ಕುಪ್ಪುಳು ಮತ್ತೆ ಮರಿಯ ಸಹಾಯಕೆ ಬಂದದೆ. ಏಳು ಸಮುದ್ರದಾಚೆಗೆ ಹಾರ್ದೆ. ಅಲ್ಲಿಂದ ಮತ್ತೊಂದು ಕಡ್ಡಿನ ತಂದದೆ. ಆ ಕಡ್ಡಿಂದ ಕಬ್ಬಿಣದ ತಂತಿ ತುಂಡು ಮಾಡಿ ಮರಿನ ಬುಡ್ಸಿದೆ. ಹಿಂಗೆ ಕಥೆ ಹೇಳಿಕಂಡ್ ಅಕ್ಕಮ್ಮಜ್ಜಿ ಇನ್ನ್ ರೋಚಕತೆನ ಹುಟ್ಟುಹಾಕ್ತಾ ಇದ್ದೊ.

ಮರಿಗ ಹಾರಿ ಹೋದಂಗೆ ಕುಪ್ಪುಳು ಹಕ್ಕಿನ ಸಂಸಾರ ಆ ಗೂಡು ಬುಟ್ಟು ಬೇರೆ ಕಡೆಗೆ ಹಾರಿ ಹೋದವೆ. ಆ ನಾವು ಹಡ್ಕಿ ಆ ಗೂಡ್‌ನ ತಾಕು. ಆದ್ರೆ ಗೂಡ್‌ಲಿ ಇರ್ವ ನೂರಾರ್ ಕಡ್ಡಿಗಳ್ಲಿ ಸಂಜೀವಿನಿ ಕಡ್ಡಿನ ಹುಡ್ಕುದು ಹೆಂಗೆ? ಅದರೊಟ್ಟಿಗೆ ಕಬ್ಬಿಣದ ತುಂಡು ಮಾಡೋ ಕಡ್ಡಿನೂ ಹುಡ್ಕೊಕಲ? ಅದ್ಕೆ ಸ ಒಂದು ಉಪಾಯ ಉಟ್ಟು. ಗೂಡ್‌ಂದ ಒಂದೇ ಒಂದು ಕಡ್ಡಿ ಬೀಳದಂತೆ ತಾಕು. ಆ ಕಡ್ಡಿಗಳ್ನೆಲ್ಲಾ ಒಂದೊಂದೇ  ಹರಿವ ನೀರ್‌ಲಿ ಹಾಕಕು. ಸಾಧಾರಣ ಕಡ್ಡಿಗ

ನೀರ್‌ನೊಟ್ಟಿಗೆ ಹರ್ಕಂಡ್ ಹೋದೆ. ಆದರೆ ಸಂಜೀವಿನಿ ಕಡ್ಡಿ ಹಂಗೆ ಕಬ್ಬಿಣ ತುಂಡುಮಾಡೋ ಕಡ್ಡಿ ಮಾತ್ರ ನೀರ್‌ನ ವಿರುದ್ಧ ದಿಕ್ಕ್‌ಲಿ ಹೋದೆ. ಆ ಎರಡ್ ಕಡ್ಡಿಗಳ ಹೆರ್ಕಿ ತಾಕು. ಹಂಗೇ ಸಿಕ್ಕಿದ ಕಡ್ಡಿಂದ ಯಾರಾದರ್ ಸತ್ತರೆ ಬದುಕಿಸಕ್. ಹಿಂಗೆ ವೈಜ್ಞಾನಿಕ ಜಗತ್ತಿಗೇ ಸವಾಲೊಡ್ಡುವ ರೋಚಕ ವಿಚಾರನ ಹೇಳ್ತಾ ಇದ್ದೋ ಅಕ್ಕಮ್ಮಜ್ಜಿ. ಅದ್ ಅಲ್ಲಿಗೆ ಮುಗ್ಯದೇ ಎರಡನೇ ಕಡ್ಡಿಯ ಪ್ರಯೋಜನನ ತಿಳ್ಸಿದೊ.

ನಾವ್ಗೆ ಏನಾರ್ ದುಡ್ಡು ಬೇಕ್‌ತ ಆದರೆ ಆ ಕಡ್ಡಿನ ತಕಂಡ್ ಹೋಗಿ ಬೀಗ ಮುರ್ದ್ ಹಣ ತಕಂಡ್ ಬಾಕ್. ಹಂಗೇನಾರ್ ಸಿಕ್ಕಿ ಬಿದ್ದ್ ಜೈಲ್‌ಗೆ ಹಾಕಿರೆ ಅಲ್ಲಿ ಅದೇ ಕಡ್ಡಿನ ಬಳ್ಸಿಕಂಡ್ ಬೀಗ ಮುರ್ದ್ ಹೊರಗೆ ತಪ್ಪಿಸಿಕಂಡ್ ಬಾಕ್. ಎಂಥಾ ಕಬ್ಬಿಣ ಆದ್ರೂ ಅದರ್‌ಂದ ತುಂಡು ಮಾಡಕ್! ತೇಲೋ ಅಕ್ಕಮ್ಮಜ್ಜಿ, ಕುಪ್ಪುಳುನ ಗೂಡು ಕಾಂಬಕೆ ಸಿಕ್ಕಿದೆನಾ? ಕೇಳ್ರೆ... ಕಾಂಬಕೆ ಸಿಕ್ಕಿರೆ ಮಾತ್ರ ಛಾನ್ಸೇ.. ಉಮ್ಮಾ.. ಇದೆಲ್ಲಾ ಸುಳ್ಳೋ.. ಸತ್ಯನೋ ಗೊತ್ಲೆ.. ನನ್ನ ಅವ್ವ ಸ ನಂಗೆ ಹಿಂಗೆ ಕಥೆ ಹೇಳ್ತಾ ಇದ್ದೊ ತಾ ತಮ್ಮ ಪುರಾತತ್ವದ ಐಹಿತ್ಯನ ದಾಖಲಿಸ್ತಾ ಇದ್ದೊ.

ಇದೇ ಅಕ್ಕಮ್ಮಜ್ಜಿ ಕುಪ್ಪುಳುನ ಬಗ್ಗೆ ಇನ್ನೆರಡ್ ಐಹಿತ್ಯನ ಹೇಳ್ತಾ ಇದ್ದೊ. ಕುಪ್ಪುಳು ಒಮ್ಮೊಮ್ಮೆ ದೋಸೆ ಹೊಯ್ದದೆ. 'ಚುಯಿಂ' ತಾ ಸದ್ದ್ ಮಾಡಿಕಂಡ್ ದೋಸೆ ಹೊಯ್ಯಕನ ಮೈಮೇಲೆ ಕೆಡು ಇದ್ದವು ಒಂದು ಎಲೆನ ಕೊಯ್ದ್ ಅದರ ತೊಟ್ಟ್‌ನ ಕೆಡುನ ಮೇಲೆ ಉಜ್ಜಕು. ಎರಡೇ ದಿನಲಿ ಕೆಡು ಉದ್ರಿ ಹೋದೆ. ಕೆಮಿ ನೋವು ಇರವು ಆ ದೋಸೆನ ಎಣ್ಣೆಲಿ ಕಾಸಿ ಚಣ್ಣ ಮೇಲೆ ಆ ಎಣ್ಣೆನ ಕೆಮಿಗೆ ಬುಟ್ಟರೆ ಕೆಮಿ ನೋವು ಮಾಯ ಗಡ. ಅಕ್ಕಮ್ಮಜ್ಜಿಯ ಮಾತ್ ಕೇಳಿ ಸುಮಾರ್ ಜನ ಪ್ರಯತ್ನ ಮಾಡ್ದವೂ ಒಳೊ. ಆದ್ರೆ ಕೆಡು ಮಾಯ ಆದರ ಬಗ್ಗೆ ಮಾತ್ರ ಸುದ್ದಿ ಇಲ್ಲೆ. ಆಗ ಮಾತ್ರ ಸೀತಾರಾಮ ಭಟ್ರ ತಂತ್ರಕ್ಕೆ ಕಟ್ಟು ಬಿದ್ದವೆ. ಅದು ಒಂದೇ ತೊಡಿಕಾನದ ದೇವರ ಮೀನಿಗೆ ಅಕ್ಕಿ ಹಾಕಕು ತೇಳಿಯೋ ಇಲ್ಲೆ ಮಧೂರು ಗಣಪಂಗೆ ಪಚ್ಚಪ್ಪ ಮಾಡಿಸಕು ತೇಳಿಯೋ ಹಿಂಗೆ ಸಾಗಿದೆ ಅವರ ಸೂಚನೆಗ. ಆದ್ರೆ ಈ ತಂತ್ರವೂ ಫಲಿಸದೇ ಇದ್ದರೆ ಅಕ್ಕಮ್ಮಜ್ಜಿಯ ಕುಪ್ಪುಳು ಮುಷ್ಠಿ ಮಾತ್ರ ಮೂಢ ನಂಬಿಕೆಯಾದೆ. ಸೀತಾರಾಮಭಟ್ಟರ ದೇವರ ಹರಕೆ ಒಂದು ಸಂಕಲ್ಪ ಶಕ್ತಿ ಆದೆ.

---

## ಯಾಗಪ್ಪಾ ಮುಗ್ದದೆ ಈ ಕೆಲ್ಸ!!?

**–ಕೂಡಕಂಡಿ ತರುಣ್**

ಮಳೆಗಾಲ ಸುರು ಆತ್. ಸಾಮಾನ್ಯವಾಗಿ ನಾವೆಲ್ಲ ಕೃಷಿನ ಅವಲಂಬಿಸಿಕಂಡ್ ಇರ್‌ದರ್‌ಂದ ನಾವ್ಗೆ ಪುರ್ಸೊತ್ತು ಇರ್‍ದುಲೆ. ಜೂನ್ ತಿಂಗಲ್ಲಿ ಗದ್ದೆ ಹೂಡುವೆ, ಜೂನ್ ಮದ್ಯಲಿ ಬೀಜ ಹಾಕಿ ಜುಲೈ ತಿಂಗಲ್ಲಿ ನಾಟಿ ಮಾಡುವೆ. ಅದ್ ಜನಕ್ಕೆ ಜನ ತೇಳ್ರೆ ಕೂಡಿ ಆಡಿಕಂಡ್ ಕೆಲ್ಸ. ನೆರೆಮನೆಯವು ನಮ್ಮಲ್ಲಿಗೆ ಬಂದರೆ, ಅವರಲ್ಲಿಗೆ ನಾವು ಹೋಕು...

ಹಂಗೆ ನಾಟಿ ಕೆಲ್ಸ್ ಎಲ್ಲ ಜುಲೈ ತಿಂಗಲ್ಲಿ ಮುಗೆಕನ ಏಲಕ್ಕಿ ತೋಟ ಕಚ್ಚಡ ಹಂಗೆ ಏಲಕ್ಕಿ ಕೊಯ್ಯುವ ಕೆಲ್ಸ ಸುರಾದೆ ಅದರೊಟ್ಟಿಗೆ ಗದ್ದೆ ಕಳೆ ತೆಗ್ಯದು. ಹಂಗು ಹಿಂಗು ತಾ ಕೆಲ್ಸ ಮುಗ್ಸಿ ಸುಸ್ತಾಗಿರ್ಕನ ಕೈಲ್‌ಮೂರ್ತ ಹಬ್ಬ ಬಂದದೆ. ಗೌಜಿಲಿ ಹಬ್ಬಮಾಡಿ ಆರು ತಿಂಗ ಚಳಿ, ಗಾಳಿ, ಮಳೆ ಅಲ್ಲದೆ ಗದ್ದೆಲಿ ಕೆಲ್ಸ ಮಾಡಿ ಸುಸ್ತಾಗಿದ್ದದೆ. ಹಂಗೆ ಗದ್ದೆಲಿ ಕದ್ರ್ ಹೋಕೆ ಸುರು ಆಕನ ಹುತ್ತರಿ ಹಬ್ಬ ಬಾತ್. ಅದ್ ಮುಗ್ದಂಗೆ ಬೆಳೆ ಕೆಲ್ಸ ಸುರು. ಅಯ್ಯೋ ಯಾರಿಗೆ ಹೇಳ್ದು ಬೆಳೆ ಕೆಲ್ಸನ, ಮೈ ಕೈ ಎಲ್ಲ ಹೈಲ್ ಮಾಡಿಕಂಡ್, ತೊರ್ನಿಕಂಡ್ ಒಂದು ತಿಂಗ ಕೆಲ್ಸ...

ಅಬ್ಬ ಬೆಳೆ ಕೆಲ್ಸ ಮುಗ್ತ್, ಮೈ ಕೈ ಎಲ್ಲ ಬೇನೆ.. ಆದ್ರು ಗದ್ದೆ ಕೆಲ್ಸ ಮುಗ್ತಲಾತ ಕುಸಿ.. ಆದ್ರೆ ಏನ್ ಮಾಡ್ದು ತೋಟಕೆ ಹೋಗಿ ನೋಡ್ರೆ ಕಾಫಿ ಹಣ್ಣಾಗಿ ನೋಡಿಕಾಲೆ.. ಕಾಡ್‌ಬೆಕ್ಕು, ಕುರ್ರೆಗ ತಿಂದ್ ಬೇಳೆ ಮಾಡಿ ಹಾಕುಟು. ಪುನಃ ಕಾಫಿ ತೋಟಲಿ ಕೆಲ್ಸ.. ಕಾಫಿ, ಮೆಣ್ಸ್ ಕೊಯ್ದ್ ಅದ್ರ ಒಣ್ಗ್‌ಸಿ ಆಕನ ಮಾರ್ಚ್ ಆದೆ.. ಅಬ್ಬ ಕೆಲ್ಸಗ ಎಲ್ಲ ಆತ್ ತೇಳಿ ಕುದ್ರ್‌ಕನ ನಾಕ್ ಮದ್ವೆಗ ಬೇರೆ. ಅಲ್ಲಿ ಇಲ್ಲಿ ಮದ್ವೆ, ಹರಿಸೇವೆ ತಾ ತಿರ್‌ಗಾಡಿ ಬಾಕನ ಮೇ ತಿಂಗ ಮುಗ್ಯಕೆ ಆದೆ.

ಮಳೆ ಹಿಡಿವಂಗೆ ಕಂಡದೆ. ಹಂಞ ದಿನ ಮಾತ್ರ ಪುರುಸೊತ್ತು. ಪುನ ಸುರಾದೆ ಗದ್ದೆ ಕೆಲ್ಸ.. ಹಿಂಗೆ ವರ್ಷ ಪೂರ್ತಿ ನಮ್ಮೂರ್‌ನ ರೈತಂಗೆ ಕೆಲ್ಸ. ಅದರ್ಲೂ ಒಂಥರ ನೆಮ್ಮದಿ.

## ಪ್ಯಾಸನ್

–ಕುಡೆಕಲ್ ಮನೋಜ್

ಹಣೆಗದ್ ಬೊಟ್ಟು, ಮುಡಿಗದ್ ಹೂವು
ನೋಡಿಕೆ ಪೊರ್ಲಿತ್ತ್
ಬುಟ್ಟೋತ್ ಎಲ್ಲ. ಒಂದೊಂದೆ ಮೆಲ್ಲ
ನಾವ್ಗೆಲ್ಲ ಬೇಕಿತ್ತ್
ಹತ್ತ್ಯೋಳ ಉಬರ್‌ನ ಕಣ್ಮುಚ್ಚಿನೆ
ಫಾರಿನ್ ಪ್ಯಾಸನ್ನ್‌ನ ಕೊಳಂಜಿಗೆನೆ
ಬುಟ್ಟೋಗಿ ಈ ನಮ್ಮ ಹಳ್ಳನನೆ

ಬೆಳ್ಳಿನ ಗೆಜ್ಜೆ, ಕಾಲ್‌ಹೆ ಹಬ್ಬಿದ
ಹೂ ಬೊಳ್ಳಿನ ಹಾಂಗಿತ್ತ್
ನಡುಬಕ್ತಲೆ ಬಾಚಿದ, ಕೂದಲ್ನ ಗೆಲ್ಲ್‌ಲಿ
ಬಣ್ಣದ ಹೂವಿತ್ತ್
ಮೋರೆಗೆ ಬಲೆಬಲೆ ಮುಸುಕಲ್ಲನೆ
ಹಾರಿಕೆ ಇಳಿಬುಟ್ಟ ಕೂದಲ್‌ನೆ
ಅದ್‌ನೋಡಿಕೆ ಹರ್‌ಂಡಿದ ಬಿಳ್ಗಿಲ್‌ನೆ

ಬಣ್ಣದ ಬಟ್ಟೆಗ ನೋಟಕೆ ತಕ್ಕಂಗೆ
ತಾಳನ ಹಾಕ್ತುಟ್ಟು
ಬಳಿವದ್ ಬಣ್ಣಗ, ಮೋರೆಗೆ ತುಂಬಿದ್
ನಿಜರೂಪ ಎಲ್ಲಿಟ್ಟು
ಬಿಳಿ ಕಾಂಬೊದೆಲ್ಲ ಹಾಲಲ್ಲನೆ
ಯಾರೋ ಬುಟ್ಟೋದ್ ನಾವ್ಗೇಕೆನೆ
ನಾವ್ಗೆ ನಮ್ಮೂರ ಪ್ಯಾಸನ್ನೆ ಲಾಯ್ಕಲ್ಲನೆ..?

## ಹಾಸ್ಯ

–ಮೇರ್‌ಕಜೆ ಲೋಹಿತ್ ಸೋಮಯ್ಯ

ಅವ್ವ : ಎಷ್ಟ್ ದಿನಂದ ನಿಂಗೆ ಈ ಕೆಟ್ಟ ಅಭ್ಯಾಸ?

ಪಿಳ್ಳಿ : ಯಾವ ಅಭ್ಯಾಸ ಅವ್ವ?

ಅವ್ವ : ಲಾಟರಿ ಟಿಕೆಟ್ ತಕಂಬದು..

ಪಿಳ್ಳಿ : ಅದು ನಮ್ಮ ಕರ್ನಾಟಕ ರಾಜ್ಯಲಿ ಇಲ್ಲೆ..

ಅವ್ವ : ಸುಳ್ಳು ಹೇಳ್ಬಡ ಪಾಪ್ರು ಹೈದ.. ನಿನ್ನ ಷರ್ಟ್ ಜೇಬ್‌ಲಿ ಕೆಂಪು ಕಲರ್ ಲಾಟರಿ ಟಿಕೆಟ್ ಸಿಕ್ಕಿತ್. ಹರ್ದ್
ಬಿಸಾಕೊಳೆ ಅದ್ರ..

ಪಿಳ್ಳಿ : ಅಯ್ಯೋ.. ನಿನ್ನ ಬಾಯಿಗೆ ಮಣ್ಣ್‌ಹಾಕ.. ನಿನ್ನ ದೊಂಡೆ ಕಟ್ಟ... ಅದ್ ಎರಡ್ ಸಾವಿರ ರುಪಾಯ್ನ ಹೊಸ ನೋಟು ಅವ್ವ...

## ಅಮವಾಸೆಲಿ ಗೌರಿ ಹುಟ್ಟಿತ್

–ಕುಡೆಕಲ್ ಸವಿತ

ಅಮ್ಮಂಗೆ ಅಂದ್ ಏಕೋ ಹೆದ್ರಿಕೆ
ಅಪ್ಪನ ಬುಡಿ, ಯಾಗೋಳ್ ಗಡಿಗಡಿನೇ
ನಾ ಮಾತ್ರ ಆ ದಿನ ಭಾರೀ ಖುಸಿಲಿದ್ದೆ
ನಾ ಹಟ್ಟಿನ ಬ್ಯೊಪಣೆಲಿ ಕುದ್ದಿದ್ದೆ

ಹಟ್ಟಿಲಿ ಇಂದೇಕೋ ವಿಸೇಸ ಕಾಣ್ತಿತ್ತ್
ಕೆಂಪಿ ಹಸ್ ನಿತ್ತಲ್ಲಿ ನಿಲ್ತಿಲ್ಲೇ
ಕೆಂಪಿನ ಹೊಟ್ಟೆ ನೋಡ್ಕನ
4 ವರ್ಸದ ನಂಗೇ ಖುಸಿಯಾಗ್ತಿತ್ತ್

ಅಮ್ಮ ಚಪ್ಪೆ ಮೋರೆಲಿ ಬಂದ್ ಹುಲ್ಲ್ ಹಾಕಿದೊ
ಅಪ್ಪ ಬಂದ್ ಹಸ್‌ನ ತಿರ್‍ಗಿಸಿ ಕಟ್ಟಿದೊ
ಈ ದಿನ ಭಾರೀ ಹಾಳ್ ಕಾಣ್ತಿತ್ತ್
ಏಕೇತ ಹೇಳ್ರೆ ನಟ್ಟ ಅಮವಾಸೆ ಆಗಿತ್ತ್

ಇಂದ್ ಕರ್ ಹಾಕದಿದ್ದರೆ ಕಯ್ಯ್ದ್ ಕೊಣ್ತೇತ
ಅಮ್ಮ ಬೇಡಿಕಣ್ತಿದ್ದೊ
ಕೆಂಪಿ ಬೇಗ ಕರ್ ಹಾಕಲಿ ದೇವ್ರೆತ
ನಾ ಬೇಡಿಕಣ್ತಿದ್ದೆ

ಅಮ್ಮ ಬಂದ್ ಬ್ಯೊಪಣೆಂದ ನನ್ನ ಇಳ್ಸಿದೊ
ಮಕ್ಕ ನೋಡಿಕಾಗದ್‌ತ ಜೋರ್ ಮಾಡಿದ್ದೊ
ಹಂಞ ಹೊತ್ತ್‌ಲಿ ನಟ್ಟ ಮದ್ಯಾನ
ಅಮವಾಸೆಲಿ ಹೆಣ್ಣ್ ಕರ್ ಹಾಕಿತ್

ಎಲ್ಲರ್‌ಂದ ಖುಸಿ ನಂಗೆನೆ ಆಗಿತ್ತ್
ಹೆಣ್ಣ್ ಕರ್‌ತ ಅಮ್ಮನೂ ಖುಸಿ ಪಟ್ಟಿದ್ದೊ
ಅಮವಾಸೆ ದಿನ ಮನೆಗೆ ಹಾಳ್‌ತ
ಮೂಕ ಪ್ರಾಣಿನ ಬೊಯ್ದಿದ್ದೋ

ಪ್ರಕೃತಿ ಧರ್ಮನ ಬದಲಾಯಿಸಿಕೆ
ಆದುಲೇತ ಎಲ್ಲವ್ಕೂ ಗೊತ್ತಾಗಿತ್ತ್
ಗೌರಿ ಮಾತ್ರ ನನ್ನ
ಜೀವಂತ ಆಟದ ಸಾಮಾನಾಗಿತ್ತ್

ಕೋಳಿನ ಕುದ್ಕ ಹೊತ್ತರೂ
ಕೈಗೆ ಕತ್ತಿ ತಾಂಗಿರೂ
ಯಾರ್ ಜಾರಿ ಬಿದ್ದರೂ
ಎಲ್ಲವೂ ಸೇರಿ ಕೆಂಪಿಗೆ ಬೊಯ್ತಿದ್ದೊ.

ನನ್ನೊಟ್ಟಿಗೆನೆ ಬೆಳ್ದ ಗೌರಿ ಈಗ
ನಾಲ್ಕ್ ಕರ್‌ಗಳ ಹಾಕಿಟು
ಮಾತ್ ಬರದ ಗೌರಿನ ಹೃದಯ
ತುಂಬಿ ಹೋಗಿಟು

## ಶ್ರೀ ಭದ್ರಕಾಳಿ

**–ಕೊಕ್ಕಲೇ ಮಾಲಿನಿ ಮುತ್ತಪ್ಪ**

"ಶ್ರೀ ಭದ್ರಕಾಳಿ" ನೆಲ್ಲೊಳ ನೀ ಹೊರಮಲೆ ನಾಡ್‌ಲಿ
ಅವ್ವ ಭದ್ರಕಾಳಿ ಪೊರ್ಲುನ ಹೆಸ್ರ್‌ಲಿ

ಹಚ್ಚ ಹಸ್ರ್‌ನ ಸ್ವರ್ಗಲಿ ಬೆಟ್ಟಗುಡ್ಡ ನಡೂನ ಪೊರ್ಲುಲಿ
ಅವ್ವ ನೆಲ್ಲೊಳ ನೀ ಲಾಯಕ್‌ನ ರೂಪಲಿ

ಎರಡ್ ವರ್ಷಕ್ಕೊಮ್ಮೆ ನಡೆಯುವ ಹಬ್ಬಲಿಎಲ್ಲರ್‌ನ ನೀ
ಒಂದುಗೂಡ್ಸಿಯ ಇಲ್ಲಿ.
ಅವ್ವ ನೆಲ್ಲೊಳ ನೀ ಪುಣ್ಯದ ಮಣ್ಣ್‌ಲಿ

ಭಕ್ತರ ಕಾಯಕೆ ಕುದ್ದೊಳ ನೀ ಕಲ್ಲುಗುಡಿಲಿ
"ಶ್ರೀ ಭದ್ರಕಾಳಿ" ನೆಲ್ಲೊಳ ನೀ ಹೊರಮಲೆ ನಾಡ್‌ಲಿ

ಅವ್ವ ಸತ್ಯ–ಧರ್ಮನ ಉಳ್ಳೊಳ ನೀ.
ಅವ್ವ ನಾವ್ಗ್‌ಳ ಕಷ್ಟನ ಪರಿಹಾರ ಮಾಡಿಯ

ಬೇಡ್ದ್ ಸುಖ–ಶಾಂತಿ ಭಾಗ್ಯನ ಕೊಟ್ಟಿಯ
ಹರಕೆ ಕಾಣಿಕೆನ ಭಕ್ತರ್ ತಂದ್ ನಿಂಗೆ ಒಪ್ಪಿಸುವೆ

ತಪ್ಪುನೆಲ್ಲ ಒಪ್ಪುಮಾಡ್ ತೇಳಿ ನಿಂಗೆ ಕೈಮುಗ್ದವೆ
"ಶ್ರೀ ಭದ್ರಕಾಳಿ" ನೀ ನೆಲ್ಲೊಳ ಈ ಕೊಡ್‌ಗ್‌ಲಿಅವ್ವ
ಭದ್ರಕಾಳಿ ಪೊರ್ಲುನ ಹೆಸ್ರ್‌ಲಿ

## ಕಹಳೆ

**–ಸುಮಂಗಲ ಯು ಕಿಣಿ**

ಇದ್ ಹರ್ಷೋತ್ಸಾಹದ ಅಂತರಾಷ್ಟ್ರೀಯ ಮಹಿಳಾ ದಿನ।
ಹೊರ್ಪೊಲೊ ಹೊಗಳಿಕಂಡ್ ಗುಂಪುಕೂಡ್ದ ಬಣ

ಮನೆಮನವ ಒಪ್ಪ ಓರಣವಾಗಿಟ್ಟು
ನಡೆಸುವಳು ಜೀವನ ಸಮರ್ಥ
ಮನಕಾಣಿರಿ ಆಕೆನ ಕರ್ತವ್ಯಪರತೆನ, ಬುಡಿ ಇನ್ನಾದರ್ ಸ್ವಾರ್ಥ

ಹಗಲಿರುಳು ಶ್ರಮಿಸಿ, ನೊಂದು ಬೆಂದು ಕಂಡರೂ ಕನಸು
ನೊಗ ಮುರಿದರೂ ಮೊಗ ಅರಳ್ಸಿ, ಸಂಭ್ರಮಿಸುವ ಸ್ಥಿರ ಮನಸ್

ಹೆಣ್ಣ್ ತೇಳ್ರೆ ಮಾನವಿತೆಯ ಮತ್ತೊಂದು ರೂಪ
ಸೃಷ್ಟಿಸದಿರಿ ಇನ್ನೆಂದೂ, ಆಕೆ ನಲುಗುವ ನರಕಕೂಪ

ಹೆಣ್ಣ್ ತೇಳ್ರೆ, ಸೃಷ್ಟಿನ ಬೆಳಗುವ ನಂದಾದೀಪ
ಪ್ರೀತಿ, ಪ್ರೇಮ, ಗೌರವವೆಂಬೀ ತೈಲ
ಹೊಯ್ದು, ಹಚ್ಚಿ ಸೌಗಂಧಿಕ ಧೂಪ

ನೆತ್ತರು ಬಸಿದರೂ, ಅತ್ತರು ಸುಗಂಧ ಸೂಸುವ ಮಹಾಮಾತೆ
ಮೊಗೆದಷ್ಟು, ಮತ್ತೆ ಮತ್ತೆ ತುಂಬಿ ಅಂತ್ಯವಾಗದ ಖಾತೆ

ಜಗದಗಲ ಸೃಷ್ಟಿಯೊಳು, ಆಕೆ ಅತ್ಯುನ್ನತ ಪಾತ್ರ
ಏಕಕಾಲದಿ ದೃಷ್ಟಿಯ ಹರಿಸಿ, ತಿರುಗಿಸುವಳು ದಿವ್ಯನೇತ್ರ

ಜನ್ಮಜನ್ಮಾಂತರದ ಋಣಾನುಬಂಧ, ಮಹಿಳಾ ಸಂಬಂಧ
ಸದಾ ನೀಡಿ ಸಲಹಿ, ಅನುರಾಗದ ಕಬಂಧ

ಸಾಲದ್ ಬಾಯ್ಮಾತಿನ ಹಾರೈಕೆಯ ಬರಿ ಕಹಳೆ
ಐಕ್ಯತೆಂದ ಹೋರಾಡಿ, ಅಂತ್ಯ ಹಾಡಿ ಆಕೆಗಾಗುವ ರಗಳೆ

ಸದಾ ಹಂಬಲಿಸುವೆ, ಬರಲಿ ಆ ಶುಭಗಳಿಗೆ
ಆಗಲೇ ಈ ಜಗದಿ, ಸಂಸ್ಕೃತಿ, ಸಂಸ್ಕಾರ ಕೂಡಿದ ಬದುಕ ನಿಜ ಏಳಿಗೆ

ಒಲಿದರೆ ನಾರಿ, ಮುನಿದರೆ ಮಾರಿ, ಇದ್ ಬರೀ ನುಡಿ
ಕಣ್ಣ ಮುಚ್ಚಿ ಧ್ಯಾನಿಸಲ್, ಸಾಕ್ಷಾತ್ ಪ್ರೇಮದೇವತೆಯ ಗುಡಿ

ಮಹಿಳೆ ಇಲ್ಲದ ಮನೆ, ಮಸಣ ಸಮಾನ,
ಬಯಸಳು ಯಾವುದೇ ಬಿರುದು ಸಮ್ಮಾನ
ಹನಿದರೆ ತಂಪನೆ ಸುರಿವ ಮಳೆ, ಅರಿತು ಬಾಳಲು ಸದಾ
ನಳನಳಿಸುವ ಹಸಿರ ಕಳೆ

# ಉಪಕಾರ ಉಪದ್ರ

**– ಉಳುವಾರನ ರೋಶನ್ ವಸಂತ್**

ಉಪಕಾರ ಮತ್ತೆ ಪರೋಪಕಾರ ಮನ್ಸನ ಬದ್ಕ್‌ನ ಮಹಾನ್ ಮೌಲ್ಯಗಳ್ಲಿ ಒಂದು, ಇನ್ನೊಬ್ಬರ ಕಷ್ಟ, ಬೇಜಾರ್‌ನ ನೋಡಿ ಮನ್ಸ್‌ಕರ್‌ಗಿ ಮಾನವೀಯತೆನ ದೃಷ್ಟಿಂದ ಮಾಡ್‌ವ ಎಲ್ಲಾ ಉಪಕಾರ, ಸಹಕಾರ, ದಾನಗಳ್‌ನ ಉಪಕಾರತ ಹೇಳಿವೆ. ಹಂಗೆ ಬ್ಯಾರೆಯವ್ಕೆ ಉಪಕಾರ ಮಾಡ್‌ದ್ದೇ ಪರೋಪಕಾರ ಪರೋಪಕಾರ್‌ಕಾಗಿ ಮರಹ ಹಣ್ಣ್‌ಗಳ್‌ನ ಕೊಟ್ಟವೆ. ಹೊಳೆಗ ಹರ್ದವೆ. ಹಸ್‌ಗ ಹಾಲ್‌ನ ಕೊಟ್ಟವೆ.

ಉಪಕಾರ ಮಾಡ್‌ದ್ದ ಸಹ ಬದ್‌ಕ್ಕ್‌ನ ಸೌಭಾಗ್ಯತ ತಿಳ್‌ಕೊಣೊಕ್ ಇಂತಹ ಪರೋಪಕಾರಿ ಜನ್‌ರ್‌ನ ದೇವ್ರೆ ಸೃಷ್ಟಿ ಮಾಡಿ ಭೂಮಿಗೆ ಕಳ್‌ಸಿವೇತ ಹೇಳ್ವ ಸರ್ವಜ್ಞ ಕವಿಗ.

ಉಪಕಾರ ಮಾಡ್‌ದರ್‌ಂದ ನಾವು ಕಳ್‌ಕೊಣ್ಣುದ್ ಏನು ಇಲ್ಲೆ. ಅದರ್‌ಂದ ನಮಿಗೆ ಒಳ್ಳೆದಾದೆ ಯಾರ ಮನ್‌ಸ್ನ್‌ಲಿ ಉಪಕಾರ ಮಾಡ್ವ ಬುದ್ದಿ ಇದ್ದದೆಯೋ ಅವೇ ಸುಖಿಗ. ಇದರ್‌ಂದ ಅವರ ಕಷ್ಟಗ ಎಲ್ಲ ಪರಿಹಾರ ಆದೆ. ಮತ್ತೆ ಮತ್ತೆ ಅವ್‌ಕ್ಕೆ ಸಂಪತ್ತ್ ಸಿಕ್ಕೆ ಸಿಕ್ಕಿದೆ. ಮನ್ಸನ ಹುಟ್ಟ್‌ನ ಸಾರ್ಥಕತೆ ಉಪಕಾರಲೆ ಉಟ್ಟು. ಉಪದ್ರ ತ ಹೇಳ್ರೆ ಇನ್ನೊಬ್ಬಂಗೆ ಕಷ್ಟ ಕೊಡ್‌ದು ತ ಅರ್ಥ. ಬೇರೆಯಾವ್ಕೆ ಮೋಸ ಮಾಡಿ ತಾನು ಲಾಭ ಮಾಡಿಕಂಬದು, ಮೋಸ ಮಾತ್ರ ಅಲ್ಲ ಅದ್ ಮಹಾ ಪಾಪ. ವ್ಯಾಪಾರಲಿ ಮೋಸ, ವ್ಯವಹಾರಲಿ ಮೋಸ ಮಾಡಿ ಶ್ರೀಮಂತರಾದು ಮಹಾಪಾಪ. ಅದರ್‌ಲಿ ಮಾಡ್ದ ಲಾಭಲಿ ಹೆಸ್ರ್ ಕೀರ್ತಿ ಪಡ್‌ಕಣ್ದು ಪಾಪನೇ. ನಿಜವಾಗಿ ಅಂತವು ಮನ್ಸಿಗೆ ಉಪದ್ರ ಮಾಡಿಕಂಡವೆ.

ನಾವ್ಗೆ ಉಪದ್ರ ಮಾಡಿ ಹಿಂಸೆ ಕೊಟ್ಟವ್ಕೆ ನೆಗಾಡಿಕಂಡೆ ಉಪಕಾರನ ಮಾಡೊಕು. ಅದೇ ದೊಡ್ಡ ಧರ್ಮತ ಮಹಾ ಭಾರತಲಿ ಅರ್ಜುನಂಗೆ ಧರ್ಮರಾಯ ಹೇಳುವೆ.

ಮನ್ಸ ಉಪಕಾರ ಮಾಡ್ದವ್ಕೆ ಉಪದ್ರ ಮಾಡ್ದನ ನಾವು ಕಾಣ್ತಾ ಇದ್ದವೆ. ಮನ್ಸರ್ ಮರಗಳ್ನ ಕಡ್ದ್ ಹಿಂಸೆ ಕೊಟ್ಟವೆ. ಆದರೆ ಅದೇ ಮರಗ ಮನ್‌ಸಂಗೆ ನೆರ್ಳ್ ಕೊಡ್ದನ ನಿಲ್ಲಿಸ್ಯುಟ್ಟ? ಉಪಕಾರಕ್ಕೆ ಸಮಾನಾದ ಬೇರೆ ಶ್ರೀಮಂತಿಕೆ ಇಲ್ಲೆ ಉಪದ್ರಕ್ಕೆ ಮಿಗಿಲಾದ ದಾರಿದ್ರ್ಯ ಬೇರೊಂದಿಲ್ಲೆ.

ಕೃತಜ್ಞತೆ ಮತ್ತೆ ಕೃತಘ್ನತೆ ಶಬ್ದದ ಅರ್ಥ ಬ್ಯಾರೆ ತರಲಿ ಉಟ್ಟು. ಕೃತಜ್ಞತೆ ತ ಹೇಳ್ರೆ ಶ್ರೇಷ್ಠ ಗುಣ. ಕೃತ ಹೇಳ್ರೆ ಮಾಡ್ದ ಉಪಕಾರ, ಜ್ಞತ ಹೇಳ್ರೆ ಅದನ್ನ ತಿಳ್‌ಕಂಡವ. ಕೃತಜ್ಞತ ಹೇಳ್ರೆ ಉಪಕಾರನ ಗ್ಯಾನ ಮಾಡಿಕಣವ. ಮಾಡ್‌ದ ಉಪಕಾರಕ್ಕೆ ಕೃತಜ್ಞತೆನ ಸಲ್‌ಸುದು ತಾ ಅರ್ಥ. ಕೃತಜ್ಞತೆ ಒಳ್ಳೆ ಸಂಸ್ಕೃತಿನ ಲಕ್ಷಣ. ಕೃತಘ್ನತೆ ಸ್ವಾರ್ಥದ ಲಕ್ಷಣ. ಮನ್‌ನ ಸ್ವಭಾವತ ಕೃತಜ್ಞ ಜೀವಿ ಆದರೆ ಅಂವ ಸ್ವಾರ್ಥಲಿ ಸಿಕ್ಕಿಕಂಡ್ ಕೃತಘ್ನನಾಗ್‌ವ ಸಾಧ್ಯತೆ ಉಟ್ಟು.

ಇಂದ್ ಸುಮಾರ್ ಜನರ ಬಾಯಿಲಿ ಉಪಕಾರ ಮಾಡಿಕೆ ಹೋಗಿ ಉಪದ್ರ ಆತ್‌ತ ಹೇಳ್ವ ಮಾತ್‌ನ ದಿನ ಕೇಳ್ತಾ ಇದ್ದವೆ. ಹೊಳೆದಾಟಿದಂಗೆ ಅಂಬಿಗನ ಹಂಗ್ಯಾಕೆ ತೇಳ್ವಂಗೆ ಸುಮಾರ್ ಜನ ಮಾಡ್ದ ಉಪಕಾರನೇ ಮರ್ತವೆ. ಉಂಡ ಮನೆಗೆ ದ್ರೋಹ ಮಾಡ್ವ ಸ್ವಭಾವನ ಬೆಳ್ಸಿಕಣದ್ ಮಹಾಭಾರತದ ಕರ್ಣನಂಗೆ ಅಧಿಕಾರ, ಗೌರವ ಉಕ್ಕುವಂಗೆ ಇದ್ದರೂ ಅದನ ಬುಟ್ಟ್ ಕಷ್ಟ ಕಾಲಲಿ ಉಪಕಾರ ಮಾಡ್ದ ಸ್ನೇಹಿತನ ಪಕ್ಷ ಹಿಡ್ದ್ ಹೋರಾಡಿ ಪ್ರಾಣ ಕಳ್‌ಕಂಡ ಕರ್ಣನ ಬದ್ಕಿಗೊಂದು ಬೆಲೆ, ನೆಲೆ.

ಪಾಪಕ್ಕೆ ಶಿಕ್ಷೆ, ಪುಣ್ಯಕ್ಕೆ ರಕ್ಷೆ, ಪಾಪಿಗಳ್ಗೆ ನರಕ ಪುಣ್ಯವಂತರಿಗೆ ಸ್ವರ್ಗ ಇದ್ ಎಲ್ಲ ಧರ್ಮಗಳ್ಲಿ ಸಾಮಾನ್ಯ. ಇನ್ನೊಬ್ಬರಿಗೆ ಹಿಂಸೆ ಕೊಡ್ದು ಪಾಪದ ಕೆಲ್ಸ. ಪರರ್‌ತ ಹೇಳ್ರೆ ಮೊನ್ಸರಷ್ಟೇ ಅಲ್ಲ ಎಲ್ಲ ಜೀವಗನೂ ಸೇರಿವೆ.

ನಮ್ಮ ಪಾಪ ಕರ್ಮಗಳ್‌ನ ಕಳಿಯಕೆ ನಾವು ದೇವರ್‌ಲಿ ನಂಬಿಕೆ ಇಸೊಕು. ದೇವರ್‌ಲಿ ನಾವು ಮಡ್ಗುವ ಭಕ್ತಿ ನಮ್ಮ ಪಾಪ ಕೃತ್ಯಗಳ್ಗೆ ಕಡಿವಾಣ ಹಾಕಿದೆ. ಸತ್ಯವಂತನ ಎದೆಲಿ ದೇವರ್ ಇರ್‌ದರ್‌ಂದ ಯಾವ ದೇವಸ್ಥಾನದ ಅವಶ್ಯಕೆನೂ ಇರ್ದುಲೆ.

ಉಪ್ಪು ಕೊಟ್ಟವ್ರ ವಯಸ್ಸಾಗುವ ಮುಟ್ಟ ಗ್ಯಾನ ಮಾಡೋಕುಂತ ಹೇಳುವಂಗೆ ಇಡೀ ಮಹಾಭಾರತದ ಕಥೆಗೆ ಕಾರಣರಾದ ಭೀಷ್ಮರ ಮನ್ಸ್ ಪೂರ್ತಿ ಪಾಂಡವರ ಕಡೆಗೆ ಇದ್ದರೂ ಉಪ್ಪುನ ಋಣಕ್ಕಾಗಿ ಕೌರವನ ಪಕ್ಷಲಿ ಸೇನಾದಿಪತ್ಯನ ವಹಿಸಿ ಹೋರಾಡಿ ಉಪ್ಪುನ ಭಾರನ ಕಮ್ಮಿ ಮಾಡಿಕಂಡೊ. ಆದರೆ ಇಂದ್ ಉಪ್ಪುನ ಋಣದ ಅರ್ಥನೇ ಜನ ಮರ್ತಂಗೆ ಉಟ್ಟು. ನಮ್ಮ ಕೈಯಿಂದ ಬೇರೆಯವ್ಕೆ ಉಪಕಾರ ಮಾಡಿಕೆ ಆಗದೇ ಇದ್ದರೂ ಉಪದ್ರವ ಮಾತ್ರ ಮಾಡಿಕಾದ್.

**ಹಳಬರ ಜೋಳಿಗೆ**

ಶ್ರೀಮತಿ ಜಯಮ್ಮ ಚೆಟ್ಟಿಮಾಡ ಅರೆಬಾಸೆ, ತುಳು ಹಂಗೆ ಕನ್ನಡ ಬಾಸೆಲಿ ಪ್ರಬುದ್ಧತೆನ ಪಡ್ದ ತ್ರಿಬಾಷಾ ಸಾಹಿತಿ. ಇವು ಇಲ್ಲಿಮುಟ್ಟ ಪುರುಷಾರ್ಥ ಸಾಧಕರು, ಕೈ ಮರ, ತನನ ದಿನನ, ಲಹರಿ, ಹನಿ ಹೊನಲು, ಕಾಡುಮೇಡಿನ ಜಾಡು, ಕತ್ತಲೆಯೊಳಗಿನ ಕಿಡಿ, ಪೂರಿಯ ಮರ ಮತ್ತು ಅಳಿಲಮ್ಮ, ನೂರೆಂಟು ಹನಿ ಹನಿಗಳು, ಪರಬಾಳ್‌ತ ಪರಪಾಳೆಳ್, ಅರಿವನರುಹಿದ ಎನ್ನ ಗುರು "ಯನ್ನಾರ್", ಹಳೆ ಬಾಳ್‌ನ ಹರ್ದ ಹಾಳೆಗ ಹಂಗೆ ಒಂದರಿಂದ ಏಳರ ಮುಟ್ಟ 'ಹಳಬರ ಜೋಳಿಗೆ' ಸಂಚಿಕೆ.

ತಮ್ಮದೇ ಆದ ಸಂಜೀವಿನಿ ಪ್ರಕಾಶನಲಿ ಸಂಪಾದಕಿ ಹಂಗೆ ಪ್ರಕಾಶಕಿ ಆದ ಇವು ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆನ ನೀಡಿಯೊಳೊ. ವೃತ್ತಿಲಿ ಶಿಕ್ಷಕಿ ಆಗಿದ್ದ ಇವ್ ನಿವೃತ್ತಿ ನಂತರ ಸಾಹಿತ್ಯ ಸೇವೆಲಿ ತಮ್ಮನ್ನ ತೊಡಿಗಿಸಿಕಂಡೊಳೊ. ಅವರ ಹಳಬರ ಜೋಳಿಗೆ ಪುಸ್ತಕ ಮಾಲೆಯ ಕೆಲವ್ ಆಯ್ದ ಲೇಖನಗಳ್ನ ನಮ್ಮ ಪತ್ರಿಕೆಲಿ ನೀವ್ಗಾಗಿ ಪ್ರಕಟಿಸ್ತಾ ಒಳೊ.

**ಕುಪ್ಪುಳು ತರ್ವ ಸಂಜೀವಿನಿ ಕಡ್ಡಿ**

**ಕತೆ ಕೊಟ್ಟವ್:**

ಇಪ್ಪತ್ತೈದ್ ವರ್ಸಗಳ ಹಿಂದೆ ತೊಂಬತ್ತಮೂರರ ಹರಯದ ಅಕ್ಕಮ್ಮಜ್ಜಿ ಹೇಳ್ತಾ ಇದ್ದ ಐಹಿತ್ಯ ಇದ್.

ಅದ್ ಕುಪ್ಪಳು (ಕೆಂಬೂತ, ಭಾರಧ್ವಾಜ) ಹಕ್ಕಿನ ಬಗ್ಗೆ ಮನೆಯ ಚಿಂಟೆಲಿ ಕುದ್ದ್‌ಕಂಡ್, “ನೀನ್ ಎಲ್ಲಿಯಾರ್ ಕುಪ್ಪುಳು ಹಕ್ಕಿನ ಗೂಡ್‌ನ ನೋಡ್ಯೊಳಾ ರಾಮಣ್ಣಾ?” ತಾ ಜುಟ್ಟು ರಾಮಣ್ಣನ ಪ್ರಶ್ನಿಸಿ ಅದರ ಮುಂದಿನ ಭಾಗ ಆಗಿ “ ಅದ್ ಹಂಗೆ ಹಿಂಗೆ, ಯಾರಿಗೆ ಸ ಕಾಂಬಕೆ ಸಿಕ್ಕುಲೆ. ಅದೃಷ್ಟ ಇದ್ದವ್ಕೆ  ಮಾತ್ರ ಕಾಂಬದು. ಬೇರೆ ಹಕ್ಕಿಗಳ ಗೂಡು ಕಂಡದೆ, ಆದ್ರೆ ಇದರ್ದ್ ಕಾಂಬಕೆ ಸಿಕ್ಕಿದೆನ? ಕುಪ್ಪುಳನ ಗೂಡ್‌ನ ಒಮ್ಮೆ ತೋರ್ಸ್ ನೋಡ್ನೋ.. ತಾ ಕುಪ್ಪಳನ ಕಂಡಂಗೆಲ್ಲಾ ಸವಾಲ್ ಹಾಕ್ತಿದ್ದೋ ಅಕ್ಕಮ್ಮಜ್ಜಿ. “ಹೌದಲಾ, ಕುಪ್ಪುಳನ ಗೂಡು ನೋಡ್ತೇಲೆ.. ಅದ್ಯಾಕೆ ಕುಪ್ಪುಳದ ಗೂಡು ಕಾಂಬಲೆ. ಅದರ್ಲಿ ಅದೇನ್ ಅದೃಷ್ಟ ಉಟ್ಟು? ಈ ಪ್ರಶ್ನೆಗೆ ಸ್ವಾರಸ್ಯಕರವಾದ ಉತ್ತರ ಅಕ್ಕಮ್ಮಜ್ಜಿ ಹತ್ರ ಇತ್ತ್. ಅದ್ನ ಅತ್ಯಂತ ರೋಚಕವಾಗಿ ಬಿಚ್ಚಿಟ್ಟೊ.

ಎಲ್ಲಿಯಾರ್ ಕುಪ್ಪುಳದ ಗೂಡುನ ಕಂಡರೆ ಅದ್ ಅಲ್ಲಿ ಮೊಟ್ಟೆ ಇಸಿಕೆ ಮುಟ್ಟ ಕಾಯಕು. ಮೊಟ್ಟೆ ಇಟ್ಟಾದ ಮೇಲೆ ಅದರ್‌ಂದ ಒಂದು ಮೊಟ್ಟೆನ ಹಕ್ಕಿಯ ಕಣ್ಣ್ ತಪ್ಪಿ ತರಕು. ಹಂಗೆ ತಂದ ಮೊಟ್ಟೆನ ಲಾಯ್ಕಲಿ ಬೇಯ್ಸಿ ಮತ್ತೆ ಅದೇ ಗೂಡ್‌ಲಿ ಇಡಕು. ಕುಪ್ಪುಳು ಎಲ್ಲಾ ಮೊಟ್ಟೆಗೆ ಕಾವು ಕೊಟ್ಟು ಮರಿ ಮಾಡ್ದೆ ಆದ್ರೆ ಬೇಯಿಸಿದ ಮೊಟ್ಟೆಂದ ಮರಿ ಬಾದುಲೆ. ಮೊಟ್ಟೆ ಹಾಳಾಗಿ ನಿರ್ಜೀವ ಆವ್ದು ತಾ ತಾಯಿ ಕುಪ್ಪುಳುಗೆ ಗೊತ್ತಾದೆ. ಅದ್ ತಕ್ಷಣ ಚುರುಕು ಆದೆ. ಏಳು ಸಮುದ್ರದಾಚೆಗೆ ಹಾರ್ದೆ. ಅಲ್ಲಿಂದ ಒಂದು ಕಡ್ಡಿ ತಂದದೆ. ಆ ಕಡ್ಡಿನ ಮೊಟ್ಟೆಗೆ ತಾಂಗಿಸಿ ಅದನ್ನ ಸಜೀವಗೊಳ್ಸಿದೆ. ಮೊಟ್ಟೆಂದ ಮರಿ ಹೊರ ಬಂದದೆ. ಈ ಕೆಲ್ಸ ಆದ ಮೇಲೆ ಅದ್ ತಂದ ಕಡ್ಡಿನ ಕುಪ್ಪುಳು ಗೂಡ್‌ಲೇ ಬುಟ್ಟುಹೋದೆ.

ಈ ಮರಿಗ ಬೆಳೆಯುವ ಹಂತಲಿ ಮತ್ತೆ ಒಮ್ಮೆ ನೋಡಿಕಣಕು. ಮರಿಗಳ್ಲಿ ಒಂದು ಮರಿನನ ಹಿಡ್ದ್ ಅದರ ಕಾಲಿಗೆ ಕಬ್ಬಿಣದ ತಂತಿನ ಬಿಗ್ದ್ ಕಟ್ಟಕು. ಆಗ ಎಲ್ಲಾ ಮರಿಗ ಹಾರಿಕೆ ಸುರು ಮಾಡ್ರೂ ಈ ಮರಿ ಮಾತ್ರ ಹಾರಿಕೆ ಆಗದೆ ಅಲ್ಲೇ ಉಳ್ದದೆ. ತಾಯಿ ಕುಪ್ಪುಳು ಮತ್ತೆ ಮರಿಯ ಸಹಾಯಕೆ ಬಂದದೆ. ಏಳು ಸಮುದ್ರದಾಚೆಗೆ ಹಾರ್ದೆ. ಅಲ್ಲಿಂದ ಮತ್ತೊಂದು ಕಡ್ಡಿನ ತಂದದೆ. ಆ ಕಡ್ಡಿಂದ ಕಬ್ಬಿಣದ ತಂತಿ ತುಂಡು ಮಾಡಿ ಮರಿನ ಬುಡ್ಸಿದೆ. ಹಿಂಗೆ ಕಥೆ ಹೇಳಿಕಂಡ್ ಅಕ್ಕಮ್ಮಜ್ಜಿ ಇನ್ನ್ ರೋಚಕತೆನ ಹುಟ್ಟುಹಾಕ್ತಾ ಇದ್ದೊ.

ಮರಿಗ ಹಾರಿ ಹೋದಂಗೆ ಕುಪ್ಪುಳು ಹಕ್ಕಿನ ಸಂಸಾರ ಆ ಗೂಡು ಬುಟ್ಟು ಬೇರೆ ಕಡೆಗೆ ಹಾರಿ ಹೋದವೆ. ಆ ನಾವು ಹಡ್ಕಿ ಆ ಗೂಡ್‌ನ ತಾಕು. ಆದ್ರೆ ಗೂಡ್‌ಲಿ ಇರ್ವ ನೂರಾರ್ ಕಡ್ಡಿಗಳ್ಲಿ ಸಂಜೀವಿನಿ ಕಡ್ಡಿನ ಹುಡ್ಕುದು ಹೆಂಗೆ? ಅದರೊಟ್ಟಿಗೆ ಕಬ್ಬಿಣನ ತುಂಡು ಮಾಡೋ ಕಡ್ಡಿನೂ ಹುಡ್ಕೊಕಲ? ಅದ್ಕೆ ಸ ಒಂದು ಉಪಾಯ ಉಟ್ಟು. ಗೂಡ್‌ಂದ ಒಂದೇ ಒಂದು ಕಡ್ಡಿ ಬೀಳದಂತೆ ತಾಕು. ಆ ಕಡ್ಡಿಗಳ್ನೆಲ್ಲಾ ಒಂದೊಂದೇ  ಹರಿವ ನೀರ್‌ಲಿ ಹಾಕಕು. ಸಾಧಾರಣ ಕಡ್ಡಿಗ ನೀರ್‌ನೊಟ್ಟಿಗೆ ಹರ್ಕಂಡ್ ಹೋದೆ. ಆದರೆ ಸಂಜೀವಿನಿ ಕಡ್ಡಿ ಹಂಗೆ ಕಬ್ಬಿಣ ತುಂಡುಮಾಡೋ ಕಡ್ಡಿ ಮಾತ್ರ ನೀರ್‌ನ ವಿರುದ್ಧ ದಿಕ್ಕ್‌ಲಿ ಹೋದೆ. ಆ ಎರಡ್ ಕಡ್ಡಿಗಳ ಹೆರ್ಕಿ ತಾಕು. ಹಂಗೇ ಸಿಕ್ಕಿದ ಕಡ್ಡಿಂದ ಯಾರಾದರ್ ಸತ್ತರೆ ಬದುಕಿಸಕ್. ಹಿಂಗೆ ವೈಜ್ಞಾನಿಕ ಜಗತ್ತಿಗೇ ಸವಾಲೊಡ್ಡುವ ರೋಚಕ ವಿಚಾರನ ಹೇಳ್ತಾ ಇದ್ದೋ ಅಕ್ಕಮ್ಮಜ್ಜಿ. ಅದ್ ಅಲ್ಲಿಗೆ ಮುಗ್ಯದೇ ಎರಡನೇ ಕಡ್ಡಿಯ ಪ್ರಯೋಜನನ ತಿಳ್ಸಿದೊ.

ನಾವ್ಗೆ ಏನಾರ್ ದುಡ್ಡು ಬೇಕ್‌ತ ಆದರೆ ಆ ಕಡ್ಡಿನ ತಕಂಡ್ ಹೋಗಿ ಬೀಗ ಮುರ್ದ್ ಹಣ ತಕಂಡ್ ಬಾಕ್. ಹಂಗೇನಾರ್ ಸಿಕ್ಕಿ ಬಿದ್ದ್ ಜೈಲ್‌ಗೆ ಹಾಕಿರೆ ಅಲ್ಲಿ ಅದೇ ಕಡ್ಡಿನ ಬಳ್ಸಿಕಂಡ್ ಬೀಗ ಮುರ್ದ್ ಹೊರಗೆ ತಪ್ಪಿಸಿಕಂಡ್ ಬಾಕ್. ಎಂಥಾ ಕಬ್ಬಿಣ ಆದ್ರೂ ಅದರ್‌ಂದ ತುಂಡು ಮಾಡಕ್! ತೇಳೋ ಅಕ್ಕಮ್ಮಜ್ಜಿ, ಕುಪ್ಪುಳುನ ಗೂಡು ಕಾಂಬಕೆ ಸಿಕ್ಕಿದೆನಾ? ಕೇಳ್ರೆ... ಕಾಂಬಕೆ ಸಿಕ್ಕಿರೆ ಮಾತ್ರ ಛಾನ್ಸೇ.. ಉಮ್ಮಾ.. ಇದೆಲ್ಲಾ ಸುಳ್ಳೋ.. ಸತ್ಯನೋ ಗೊತ್ಲೆ.. ನನ್ನ ಅವ್ವ ಸ ನಂಗೆ ಹಿಂಗೆ ಕಥೆ ಹೇಳ್ತಾ ಇದ್ದೊ ತಾ ತಮ್ಮ ಪುರಾತತ್ವದ ಐಹಿತ್ಯನ ದಾಖಲಿಸ್ತಾ ಇದ್ದೊ.

ಇದೇ ಅಕ್ಕಮ್ಮಜ್ಜಿ ಕುಪ್ಪುಳುನ ಬಗ್ಗೆ ಇನ್ನೆರಡ್ ಐಹಿತ್ಯನ ಹೇಳ್ತಾ ಇದ್ದೊ. ಕುಪ್ಪುಳು ಒಮ್ಮೊಮ್ಮೆ ದೋಸೆ ಹೊಯ್ದದೆ. 'ಚುಯಿಂ' ತಾ ಸದ್ದ್ ಮಾಡಿಕಂಡ್ ದೋಸೆ ಹೊಯ್ಯಕನ ಮೈಮೇಲೆ ಕೆಡು ಇದ್ದವು ಒಂದು ಎಲೆನ ಕೊಯ್ದ್ ಅದರ ತೊಟ್ಟ್‌ನ ಕೆಡುನ ಮೇಲೆ ಉಜ್ಜಕು. ಎರಡೇ ದಿನಲಿ ಕೆಡು ಉದ್ರಿ ಹೋದೆ. ಕೆಮಿ ನೋವು ಇರವು ಆ ದೋಸೆನ ಎಣ್ಣೆಲಿ ಕಾಸಿ ಚಣ್ದ ಮೇಲೆ ಆ ಎಣ್ಣೆನ ಕೆಮಿಗೆ ಬುಟ್ಟರೆ ಕೆಮಿ ನೋವು ಮಾಯ ಗಡ. ಅಕ್ಕಮ್ಮಜ್ಜಿಯ ಮಾತ್ ಕೇಳಿ ಸುಮಾರ್ ಜನ ಪ್ರಯತ್ನ ಮಾಡ್ದವೂ ಒಳೊ. ಆದ್ರೆ ಕೆಡು ಮಾಯ ಆದರ ಬಗ್ಗೆ ಮಾತ್ರ ಸುದ್ದಿ ಇಲ್ಲೆ. ಆಗ ಮಾತ್ರ ಸೀತಾರಾಮ ಭಟ್ರ ತಂತ್ರಕ್ಕೆ ಕಟ್ಟು ಬಿದ್ದವೆ. ಅದು ಒಂದೇ ತೊಡಿಕಾನದ ದೇವರ ಮೀನಿಗೆ ಅಕ್ಕಿ ಹಾಕಕು ತೇಳಿಯೋ ಇಲ್ಲೆ ಮಧೂರು ಗಣಪಂಗೆ ಪಚ್ಚಪ್ಪ ಮಾಡಿಸಕು ತೇಳಿಯೋ ಹಿಂಗೆ ಸಾಗಿದೆ ಅವರ ಸೂಚನೆಗ. ಆದ್ರೆ ಈ ತಂತ್ರವೂ ಫಲಿಸದೇ ಇದ್ದರೆ ಅಕ್ಕಮ್ಮಜ್ಜಿಯ ಕುಪ್ಪುಳು ಮುಷ್ಠಿ ಮಾತ್ರ ಮೂಢ ನಂಬಿಕೆಯಾದೆ. ಸೀತಾರಾಮಭಟ್ಟರ ದೇವರ ಹರಕೆ ಒಂದು ಸಂಕಲ್ಪ ಶಕ್ತಿ ಆದೆ.

# ನಮ್ಮೊಳಗಿನ ಸಾಧಕರ್



## ಚೈತನ್ಯ ಸೇವಾ ಆಶ್ರಮದ ಶ್ರೀ ಶ್ರೀ ಯೋಗೇಶ್ವರಾನಂದ ಸರಸ್ವತಿ ಸ್ವಾಮೀಜಿ

**–ಹೊಸೊಳಿಕೆ ಯೋಗೀಶ್**

ಗಂಭೀರ ವ್ಯಕ್ತಿತ್ವ, ಆಧುನಿಕ ಚಿಂತನೆ, ಹಿಂದೆನ ಮೌಲ್ಯಗಳ ಆರಾಧನೆ, ವೈಜ್ಞಾನಿಕ ಮನೋಭಾವ, ಧಾರ್ಮಿಕ ಶ್ರದ್ಧೆ, ಪ್ರಗತಿಪರ ವಿಚಾರಧಾರೆ, ಸಮಾಜಪರ ಚಿಂತನೆ, ಮಾನವೀಯ ಮೌಲ್ಯಗಳ ಆರಾಧನೆ ವಾಸ್ತವದ ನೆಲೆಗಟ್ಟ್‌ಲಿ ಬೊದ್ಕುವ ರೀತಿ– ಮಕ್ಕಳ್ಗೆ ನಂಬಿಕೆನ ಬೊದ್ಕು ಕಟ್ಟಿ ಕೊಡ್ವ ಜನ ಸಾಮಾನ್ಯರೊಟ್ಟಿಗೆ ಸಮಾನರಾಗಿ ಬೆರೆವ ಸದ್ದಿಲ್ಲದ ಸಾಧಕ– ಸುಳ್ಯ ತಾಲೂಕಿನ ಅಜ್ಜಾವರ ಚೈತನ್ಯ ಸೇವಾ ಆಶ್ರಮದ ಶ್ರೀ ಶ್ರೀ ಯೋಗೇಶ್ವರಾನಂದ ಸರಸ್ವತಿ ಸ್ವಾಮಿ.

1941 ನೇ ದಶಂಬರ 20ರಂದ್ ಅಡ್ಪಂಗಾಯ ಕುಟುಂಬದ ಬಾಲಣ್ಣ ಗೌಡ ಮತ್ತೆ ದೇವಮ್ಮ ಅವರ ಎಂಟ್ ಮಕ್ಕಳ್ಲಿ ಐದನೇ ಮಂಙ ಆಗಿ ಹುಟ್ಟಿದ ಇವ್ರ ಮೂಲ ಹೆಸ್ರ್ ಶೇಷಪ್ಪ ಗೌಡ. ಅಜ್ಜಾವರ ಸ.ಹಿ.ಪ್ರಾ ಶಾಲೆಲಿ ಸುರುನ ಪಾಠ ಕಲ್ತ್, ಸುಳ್ಯದ ಸರಕಾರಿ ಹೈಸ್ಕೂಲ್‌ಲಿ ಹತ್ತನೆ ತರಗತಿ ಮುಗ್ಸಿದ ಇವು ಮಂಗಳೂರ್‌ನ ಸರಕಾರಿ ಬುನಾದಿ ಶಿಕ್ಷಕರ ತರಬೇತು ಶಾಲೆಲಿ ತರಬೇತಿ ಮಗ್ಸಿದಂಗೆ, ಐನೆಕಿದು ಶಾಲೆಗೆ ಮುಖ್ಯ ಗುರುವಾಗಿ ನೇಮಕಗೊಂಡೊ.



ಎರ್ಡ್ ವರ್ಷ ಮಕ್ಕಳ್ಗೆ ಪಾಠ ಹೇಳ್ದ ಇವು ಪುತ್ತೂರ್‌ನ ಫಿಲೋಮಿನಾ ಕಾಲೇಜ್‌ಲಿ ಪಿ.ಯು.ಸಿ ಮುಗ್ಸಿ ಮಂಗಳೂರ್‌ನ ಅಶೋಕನಗರ ಹಿ.ಪ್ರಾ.ಶಾಲೆಲಿ ಸಹಾಯಕ ಶಿಕ್ಷಕರಾಗಿ ಎಂಟ್ ವರ್ಷ ಕೆಲ್ಸ ಮಾಡೊಳೊ. ಈ ನಡುಲಿ ಸೈಂಟ್ ಅಲೋಷಿಯಸ್ ಕಾಲೇಜಿಗೆ ರಾತ್ರೆ ಹೋಗಿ ಬಿ.ಎ ಮುಗ್ಸಿ, ಕರ್ನಾಟಕ ವಿಶ್ವ ವಿದ್ಯಾಲಯಲಿ ಎಂ.ಎ ಮುಗ್ಸಿದೊ.

ರೈತ ಕುಟುಂಬಲಿ ಹುಟ್ಟಿದ ಇವ್ಕೆ ಆಧ್ಯಾತ್ಮಿಕ ವಿದ್ಯೆಲಿ ಆಸೆ. ಜಾತಿ ಪರಂಪರೆಂದ ಬೇರೆ ಬೇರೆ ಮಠಗಳ್ಲಿ ಅವಕಾಶ ಇಲ್ಲದಾಕನ ಕೆಲ್ಸ ಬುಟ್ಟು ಹೊರ್ಟದ್ 1972ರ ಸ್ವಾತಂತ್ರ್ಯ ದಿನದಂದ್ ಬೊಂಬಾಯಿ ಚಿನ್ಮಯ ಮಿಶನ್ನಿನ ಸಂದೀಪಿನಿ ಸಾಧನಾಯಕೆ. ಅಲ್ಲಿ ಭಗವದ್ಗೀತೆ, ಉಪನಿಷತ್ತ್, ಅಭ್ಯಾಸದೊಟ್ಟಿಗೆ ಜಪ, ಧ್ಯಾನ ಕಲ್ತ್, ಶ್ರೀ ಪಂಡಿತ ದಿಗಂಬರ ಶಾಸ್ತ್ರಿ ಅವರ್‌ಂದ ವೇದ ಪಾರಾಯಣ ಕಲ್ತ್, ಶ್ರೀ ಸ್ವಾಮೀಜಿಗಳ್‌ಂದ "ಶ್ರೀ ಚೈತನ್ಯ ಸ್ವಾಮಿ" ದೀಕ್ಷೆ ಪಡ್ದೊ. ಶ್ರೀ ರಾಮಚಂದ್ರ ಐತಾಳರ ಕೈಲಿ ಜ್ಯೋತಿಶ್ಯಾಸ್ತ್ರ ಕಲ್ತ್ ಮಂತ್ರದೀಕ್ಷೆ ಪಡ್ದೊ.

ಮಂಗಳೂರು ಪೇಟೆನ ಸರಕಾರಿ ಪ್ರಾಥಮಿಕ, ಹೈಸ್ಕೂಲ್, ಕಾಲೇಜ್ ಮಕ್ಕಳ್ಗೆ ಭಗವದ್ಗೀತೆಯ ಆಧಾರಲಿ ನೀತಿ ಪಾಠಗಳ ಬೋದಿಸಿದ್ದ್ ಮಾತ್ರ ಅಲ್ಲದೆ "ಗೀತಾಪ್ರಚಾರ ಸಮಿತಿ" ಸುರು ಮಾಡಿ ಇದರ ಬೇರೆ ಬೇರೆ ಅಧ್ಯಾಯಗಳ 24 ಸಾವಿರ ಪ್ರತಿಗಳ್ನ ಪುಕ್ಕಟೆಯಾಗಿ ಹಂಚಿದೊ. ನಾಲ್ಕ್ ವರ್ಷದ ಈ ಕೆಲ್ಸಲಿ 22 ಸಾವಿರ ಮಕ್ಕ ಭಾಗವಹಿಸಿದ್ದೊ. ಯೋಗ ಶಿಕ್ಷಣ ಸಮಿತಿ ಸುರು ಮಾಡಿ 40 ಸಾವಿರಕ್ಕೂ ಹೆಚ್ಚಿನ ಮಕ್ಕಳ್ಗೆ ಯೋಗ ತರಬೇತಿ ಕೊಟ್ಟದರ ಮರೆಯಕಾದುಲೆ

1984 ರ್ಲಿ ಮಹಾರಾಷ್ಟ್ರದ ಪೂನಾ ಜಿಲ್ಲೆನ ಲೋನಾವಾಲದ ಕೈವಲ್ಯಧಾಮಲಿ ಋಷಿ ಪತಂಜಲಿ ಅಷ್ಟಾಂಗ ಯೋಗದ ಆಧಾರಲಿ ಮತ್ತೆ ಗುಜರಾತ್‌ನ ರಾಜಕೋಟ್‌ಲಿ ಯೋಗ ಚಿಕಿತ್ಸಾ ವಿಧಾನದೊಟ್ಟಿಗೆ ಯೋಗಾಸನ, ಪ್ರಾಣಾಯಾಮ, ಜಪ, ಧ್ಯಾನಬಂಧ, ಮುದ್ರಕ್ರಿಯೆ ಡಿಪ್ಲೋಮಾ ಶಿಕ್ಷಣ (ಡಿವೈಇಡಿ) ಮುಗ್ಸಿದ ಎದೆಗಾರಿಕೆ ಇವರದ್.

ಭಾರತದ ಕನ್ಯಾಕುಮಾರಿಂದ ಕಾಶ್ಮೀರ ಮುಟ್ಟ, ಗುಜರಾತ್‌ನ ಪೋರ್‌ಬಂದರ್‌ಂದ ಕಲ್ಕತ್ತದ ರಾಮಕೃಷ್ಣ ಮಿಷನ್‌ವರೆಗೆ ಪ್ರವಾಸ ಮಾಡೊಳೊ. ಹಿಮಾಚಲ ಪ್ರದೇಶದ ಋಷಿ ಪತಂಜಲಿ ಸಮಾಧಿ, ಕೇದಾರದಲ್ಲಿನ ಆದಿ

ಶಂಕರಾಚಾರ್ಯರ ಸಮಾಧಿ, ಗುಜರಾತ್‌ನ ಜಲಾರಾಮ ಸಮಾಧಿಗೂ ಹೋಗಿ ಬಂದೊಳೊ. ಶ್ರೀ ಶೈಲಜಕ್ಕೊ ಹೋಗಿ ಧ್ಯಾನ ಮಾಡಿಯೊಳೊ. ಪಳನಿ, ಕಾಂಚಿ, ರಾಮೇಶ್ವರ, ಪುಪರ್ತಿಗೂ ಹೋಗಿ ಬಂದೊಳೊ.

1997 ರ್ಲಿ ಶ್ರೀ ಸ್ವಾಮಿ ಚಿನ್ಮಯಾನಂದರವರ ಶಿಷ್ಯೆಯಾದ ಶ್ರೀ ಶಾರದಾ ಪ್ರಿಯಾನಂದ ಅವರ ಕೈಯಿಂದ ವಿದ್ವತ್ ಸನ್ಮಾನ ಪಡ್ದ್ 'ಶ್ರೀ ಸ್ವಾಮಿ ಯೋಗೇಶ್ವರಾನಂದ ಸರಸ್ವತಿ' ತೇಳ್ವ ಸನ್ಯಾ ಸ್ವೀಕರಿಸಿದೊ.

ಕಳ್ದ 17 ವರ್ಷಗಳ್ಂದ ಚೈತನ್ಯ ಸೇವಾ ಟ್ರಸ್ಟ್ (ರಿ) ಕಟ್ಟಿಕಂಡ್ ತನ್ನ ಹುಟ್ಟೂರಾದ ಅಜ್ಜಾವರ ದೇವರಕಳಿಲಿ ಚೈತನ್ಯ ಸೇವಾ ಆಶ್ರಮ ನಡ್ಸಿಕಂಡ್ ಬರ್‍ತಾ ಒಳೊ. ಇಲ್ಲಿ ಸೇರುವ ಮಕ್ಕಳದಗೆ ಊಟ, ವಸತಿ ಒಟ್ಟಿಗೆ ಗೀತಾಪಾರಾಯಣ, ವೇದ, ಜಪ, ಧ್ಯಾನಗಳ ಯಾವುದೇ ಫಲಾಪೇಕ್ಷೆ ಇಲ್ಲದೆ ಕಲ್ಸಿಕೊಟ್ಟವೆ.

ಪ್ರತಿಭೆಗ, ವಿದ್ವತ್‌ಗ ದಾಖಲಾಗದೆ ಇದ್ದರೆ ಆ ಮೊನ್ಸನೊಟ್ಟಿಗೆ ಸತ್ತ್ ಹೋದೆ. ಹಂಗಾಗಿ ಬರವಣಿಗೆ ಮುಖ್ಯ ಈ ನಿಟ್ಟ್‌ಲಿ ಯೋಚಿಸಿದ ಸ್ವಾಮಿ ತನ್ನೆಲ್ಲಾ ವಿಚಾರ ಬರವಣಿಗೆ ಮುಖ್ಯ ಈ ನಿಟ್ಟ್‌ಲಿ ಯೋಚಿಸಿದ ಸ್ವಾಮಿ ತನ್ನೆಲ್ಲಾ ವಿಚಾರ ಧಾರೆಗಳ್ಗೆ ಅಕ್ಷರ ರೂಪ ಕೊಟ್ಟು ಉಪನಿಷತ್ತ್‌ಗಳ ವ್ಯಾಖ್ಯಾನಗ, ಭಗವದ್ಗೀತೆಯ ಬೇರೆ ಬೇರೆ ಭಾಗಗ, ಆಧ್ಯಾತ್ಮಿಕ ನಾಟಕಗ, ಸಾಮಾಜಿಕ ಕೃತಿಗ, ಯೋಗದ ಕೃತಿಗ ಹಿಂಗೆ 120 ಕ್ಕೂ ಹೆಚ್ಚಿನ ಪುಸ್ತಕ ಬರ್‍ದ್ ಪ್ರಕಟಿಸಿ, ಪುಕ್ಕಟೆಯಾಗಿ ಹಂಚುವ ಸಾಹಿತ್ಯ ಕ್ರಾಂತಿಗೆ ತಾಲೂಕುನ ಕೆಲವ್ ಸಂಸ್ಥೆಗ ಗೌರವಿಸಿದ್ದ್, ಬುಟ್ಟರೆ ಜಿಲ್ಲೆ, ರಾಜ್ಯ ಮಟ್ಟಲಿ ಗುರುತಿಸ್ವ ಯೋಗ್ಯತೆ ಇದ್ದರೂ ಯಾರ ಕಣ್ಣಿಗೂ ಕಾಣದೆ ಇದ್ದರೂ, ಸ್ವಲಾಭಾನ ಯೋಚಿಸುವ ಈ ದಿನಗಳ್ಲಿ ತನ್ನ ಸರ್ವಸ್ವನ ಸಾಮಾಜಕ್ಕೆ ಧಾರೆ ಎರ್‍ದ ಪುಣ್ಯ ಕೀರ್ತಿ ಸ್ವಾಮೀಜಿ ಅವರದ್.

---

## ಪೊನ್ನಿ ತಿಂಗಳ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ದೈವಾಧೀನರಾದವರ ವಿವರ

| ಹೆಸ್ರ್ | ವಯಸ್ | ತೀರ್‍ದ ತಾರೀಖ್ |
|---|---|---|
| ಬೈಮನ ಚೆಂಗಪ್ಪ | 58 | 22–2–2017 |
| ಕೈಬಿಲಿರ ಸೀತವ್ವ | 105 | 22–2–2017 |
| ಕರ್ಕರನ ನವೀನ್ | 29 | 24–2–2017 |
| ಗುಡ್ಡನ ರುಕ್ಮಿಣಿ | 85 | 25–2–2017 |
| ಕೂಡಕಂಡಿ ಅಪ್ಪಾಜಿ | 88 | 2–3–2017 |
| ಕಾಂಗೀರ ಅಪ್ಪಾಜಿ | 77 | 4–3–2017 |
| ಪಂಜಿಪಳ್ಳ ಬಾಲಕೃಷ್ಣ | 77 | 4–3–2017 |
| ಕೋಳಿಬೈಲು ಕಮಲ | 58 | 4–3–2017 |
| ಕೊಥೊಳಿ ಅಪ್ಪಯ್ಯ | 47 | 7–3–2017 |
| ಕುದುಕುಳಿ ಲತಾ | – | 8–3–2017 |
| ಕುಯ್ಯಮುಡಿ ಕೃಷ್ಣಪ್ಪ | 67 | 9–3–2017 |
| ಬೊಳಿಯನ ದೇವಯ್ಯ | 63 | 12–3–2017 |
| ಕೀಜನ ಉತ್ತಪ್ಪ | 74 | 13–13–2017 |
| ಪುದಿಯನೆರವನ ಮುದ್ದವ್ವ | 86 | 14–3–2017 |
| ಕೊಂಪುಳಿರ ಲೋಬಯ್ಯ | 73 | 15–3–2017 |
| ಕುಂಜಿಲನ ಗಣೇಶ್‌ಕು | 41 | 15–3–2017 |
| ಯ್ಯಮುಡಿ ಕಮಲ | 84 | 15–3–2017 |

*ನಾವ್ಗೆ ಸಿಕ್ಕ ಮಾಹಿತಿ ಪ್ರಕಾರ ಇಲ್ಲಿ ಪ್ರಕಟಿಸಿಯೊಳೊ. ಇನ್ನ್ ಮುಂದೆ ಯಾವುದಾದರ್ ಮಾಹಿತಿಗ ಇದ್ದರೆ ನಮ್ಮೊಂದಿಗೆ ಹಂಚಿಕಣಿ.

# ಎರಡನೇ ವರ್ಷದ ಗೌಡ ಫುಟ್‌ಬಾಲ್




ಗೌಡ ಫುಟ್‌ಬಾಲ್ ಅಕಾಡೆಮಿ (ರಿ.) ಕೊಡಗು ಇವರ ವತಿಂದ ಎರಡನೇ ವರ್ಷದ ಗೌಡ ಫುಟ್‌ಬಾಲ್ ಪಂದ್ಯಾಟನ ಮೇ 12ಕ್ಕೆ ಸರಕಾರಿ ಕಿರಿಯ ಪ್ರಾಥಮಿಕ ಶಾಲೆ, ಮರಗೋಡು ಇಲ್ಲಿ ನಡ್ಸಿಕೆ ತೀರ್ಮಾನಿಸಿಯೊಳೊ.

ಪತ್ರಿಕಾಗೋಷ್ಠಿಲಿ ಮಾತಾಡ್ದ ಅಕಾಡೆಮಿಯ ಪದಾಧಿಕಾರಿಗ, ಕಳ್ದ ವರ್ಷ ನಡ್ಸಿದ ಪಂದ್ಯಾಟಲಿ ನಿರೀಕ್ಷೆಗೂ ಮೀರಿ ಎಲ್ಲವೂ ಸ್ಪಂದಿಸಿಯೊಳೊ. ಅದೇ ಹಿನ್ನಲೆಲಿ ಎರಡನೇ ವರ್ಷದ ಪಂದ್ಯಾವಳಿನ ಆಯೋಜಿಸ್ತಾ ಒಳೊ. ಆಸಕ್ತ ಕುಟುಂಬ ತಂಡಗ ಮೇ 5 ರ ಒಳ್ಗೆ ಹೆಸ್ರ್ ನೋಂದಾಯಿಸಿಕಣಕು ತಾ ಹೇಳ್ದೊ.

ಕಳ್ದ ಸಲ ಅವರಸರಲಿ ಆಯೋಜಿಸಿರೂ ಸುಮಾರ್ 80 ತಂಡಗ ಭಾಗಹಿಸಿದ್ದ್, ಈ ಸಲಲ 100–120 ತಂಡಗ ಬರ್ವ ನಿರೀಕ್ಷೆ ಉಟ್ಟು. ಈ ಸಲನೂ ವಿಜೇತ ತಂಡಗಳ್ಗೆ ಮೊದಲ ಇನಾಮು 30 ಸಾವಿರ, ಎರಡನೇ ಇನಾಮು 20 ಸಾವಿರ ಹಂಗೆ ಉಪಾಂತ್ಯ ತಲ್ಪಿದ ಎರಡ್ ತಂಡಗಳ್ಗೆ 10 ಸಾವಿರ ನಗದು ಒಟ್ಟಿಗೆ ಉತ್ತಮ ಆಟಗಾರರ್ಗೆ ವಯಕ್ತಿಕ ಇನಾಮುಗಳ್ನ ಸ ಕೊಟ್ಟವೆ ತಾ ತಿಳ್ಸಿದೊ. ಪಂದ್ಯಾಟಗ 7+2 ಆಟಗಾರರ ಪಂದ್ಯಾ ಆಗಿದ್ದ್, ಆಟಗಾರರ್ ಸಮವಸ್ತ್ರ ಹಾಕಂಡ್ ಆಡಕು ಹಂಗೆನೆ ಆಟ ಸುರು ಆಕೆ ಮುಂದೆ ತಮ್ಮ ಗುರುತುನ ಚೀಟಿನ ತೋರ್ಸುಕು.

ಗೌಡ ಜನಾಂಗಲಿ ಪ್ರತಿಭೆಗ ಇದ್ದರೂ ಅವ್ಕೆ ಸೂಕ್ತ ವೇದಿಕೆ ಸಿಕ್ಕದೆ ಎಲೆಮರೆ ಕಾಯಿ ತರ ಆಗೊಳೊ. ಅಂತ ಪ್ರತಿಭೆಗಳ್ನ ಗುರ್ತಿಸಿ, ಬೆಳಕಿಗೆ ತಂದ್ ಅವ್ಕೆ ಪ್ರೋತ್ಸಾಹ ನೀಡುದು ಅಕಾಡೆಮಿನ ಮುಖ್ಯ ಉದ್ದೇಶ ಆವ್ಪು ತಾ ತಿಳ್ಸಿದೊ. ಈ ಸಲ ಪಂದ್ಯಾಟಕ್ಕೆ ಸುಮಾರ್ ರೂ.7–8 ಲಕ್ಷ ಖರ್ಚಾದು ತಾ ಅಂದಾಜು ಮಾಡೊಳೊ, ದಾನಿಗಳ ಸಹಕಾರಂದ ಪಂದ್ಯಾವಳಿಮ ಆಯೋಜಿಸಲಾಗ್ತಾ ಉಟ್ಟು. ಇದರೊಟ್ಟಿಗೆ ಅಕಾಡೆಮಿಗೆ ಸದಸ್ಯರನ್ನ ನೋಂದಾವಣೆ ಂಆಡುವ ಆಬಿಯಾನನ ನಡೆಸ್ತಾ ಒಳೊ. ಸುರುಗೆ ಬಂದ 100 ಜನಕ್ಕೆ ಆದ್ಯತೆ ಕೊಟ್ಟವೆ ತಾ ಹೇಳ್ದೊ.

ಪಂದ್ಯಾಟಕ್ಕೆ ಸಂಬಂಧಿಸಿದ ಹೆಚ್ಚ್‌ನ ಮಾಹಿತಿಗೆ ಅಕಾಡೆಮಿ ಅಧ್ಯಕ್ಷ ಕಟ್ಟೆಮನೆ ರಾಕೇಶ್ (9481058358), ಸಲಹೆಗಾರ ಪಾಣತ್ತಲೆ ಜಗದೀಶ್ ಮಂದಪ್ಪ (9448976421), ಖಜಾಂಜಿ ಬಡುವಂಡ್ರ ದುಷ್ಯಂತ್ (8762549217) ಇವರ್ನ ಸಂಪರ್ಕಿಸಕ್ ತಾ ತಿಳ್ಸಿದೊ.

---

# ಕೊಡಗು ಗೌಡ ವಿದ್ಯಾಸಂಘದ ಚುಕ್ಕಾಣಿ ಹಿಡ್ದ ಹೊಸೂರು ರಮೇಶ್ ಜೋಯಪ್ಪ

ಮಾರ್ಚ್ 26 ರಂದ್ ನಡ್ದ ಕೊಡಗು ಗೌಡ ವಿದ್ಯಾಸಂಘದ ಪದಾಧಿಕಾರಿಗಳ ಚುನಾವಣೆಲಿ ಹೊಸೂರು ರಮೇಶ್ ಜೋಯಪ್ಪನವು ಗೆಲುವು ಸಾಧಿಸಿ ನಾಲ್ಕನೇ ಬಾರಿಗೆ ಅಧಿಕಾರದ ಚುಕ್ಕಾಣಿ ಹಿಡ್ದೊಳೊ.



ಶತಮಾನದಷ್ಟು ಹಳೆಯದಾದ ಈ ವಿದ್ಯಾ ಸಂಘ ಅಂದ್‌ಂದ ಇಂದ್‌ನ ಮುಟ್ಟ ನಮ್ಮ ಜನಾಂಗದ ವಿದ್ಯಾರ್ಥಿಗಳ ಏಳಿಗೆಗೆ, ಕ್ಷೇಮಾಭಿವೃದ್ದಿಗೆ ಮೀಸಲಾದ ಸಂಘ. ಈಗ ಇದರ್ಲಿ ಸುಮಾರ್ 4500 ಕ್ಕೂ ಹೆಚ್ಚ್ ನೋಂದಾಯಿತ ಸದಸ್ಯರ್‌ಗಳ್ ಒಳೊ. ಗೌಡ ವಿದ್ಯಾ ಸಂಘದ ಇತಿಹಾಸಲೇ ಇದೇ ಸುರುನ ಸಲ ಶೇಕಡ 50 ಕ್ಕೂ ಹೆಚ್ಚ್ ಮತದಾನ ಆದ್.

ದಂಬೆಕೋಡಿ ಆನಂದ, ತುಂತಜೆ ವೆಂಕಟೇಶ್, ಪರಿವಾರ ಅಪ್ಪಾಜಿ ಹಂಗೆ ಹೊಸೂರು ರಮೇಶ್ ಜೋಯಪ್ಪ ರವರ ಮುಂದಾಳ್ವತಲಿ ತಂಡಗಳಾಗಿ ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ, ಖಜಾಂಜಿ, ನಿರ್ದೇಶಕರು ಸ್ಥಾನಕ್ಕೆ ಸುಮಾರ್ 40ಕ್ಕೂ ಹೆಚ್ಚ್ ಜನ ಸ್ಪರ್ಧಿಸಿದ್ದೊ.

ಜನರ ಉತ್ತಮ ಪ್ರತಿಕ್ರಿಯೆಂದ ನಿಗದಿತ ಹೊತ್ತಿಗೆ ಮತಚಲಾವಣೆ ಹಂಗೆ ಎಣಿಕೆ ಮುಗಿಯದೆ ಬೊಳ್ಪು 1 ಘಂಟೆ ಮುಟ್ಟ ಸಾಗುಟು.

ಈ ಚುನಾವಣೆಲಿ ಅಧ್ಯಕ್ಷರಾಗಿ ಹೊಸೂರು ರಮೇಶ್ ಜೋಯಪ್ಪ, ಉಪಾಧ್ಯಕ್ಷರಾಗಿ ನವೀನ್ ಅಂಬೆಕಲ್ಲು, ಕಾರ್ಯದರ್ಶಿಯಾಗಿ ಕೊಟ್ಟಕೇರಿಯನ ದಯಾನಂದ, ಜಂಟಿ ಕಾರ್ಯದರ್ಶಿಯಾಗಿ ತಳೂರು ದಿನೇಶ್ ಕುಮಾರ್, ಖಜಾಂಜಿಯಾಗಿ ಕಟ್ಟೆಮನೆ ಸೋನಾಜಿತ್ ಹಂಗೆನೆ ನಿರ್ದೇಶಕರುಗಳಾಗಿ ಪರಿಚನ ಸತೀಶ್, ದೇವಂಗೋಡಿ ಹರ್ಷ, ಪಾಣತ್ತಲೆ ಮಂದಪ್ಪ, ಕೆದಂಬಾಡಿ ಕೀರ್ತಿಕುಮಾರ್, ಕುದುಪಾಜೆ ಬೋಜಪ್ಪ, ಪೊಕ್ಕುಳಂಡ್ರ ಮನೋಜ್, ಹುದೇರಿ ಜಗದೀಶ್ ಮಹಿಳಾ ನಿರ್ದೇಶಕರುಗಳಾಗಿ ಕಾಳೇರಮ್ಮನ ಎನ್ ಲತ, ಕೆದಂಬಾಡಿ ಕಾಂಚನ, ಚೆರಿಯಮನೆ ರೋಹಿನಿ ಗೆದ್ದೊಳೊ.

ಮತ ಕೇಳಿಕೆ ಹೋಕನ ವಿದ್ಯಾಸಂಘದ ವತಿಂದ ಒಂದು ಶಾಲೆ, ಜನಾಂಗದ ಬಡ ಪ್ರತಿಭಾವಂತ ಮಕ್ಕಳ ಗುರ್ತಿಸಿ ಅವ್ಕೆ ಪ್ರೋತ್ಸಾಹ ಕೊಡ್ದು ಹಂಗೆನೆ ಮೈಸೂರ್‌ಲಿ ಇರ್ವ ವಿದ್ಯಾರ್ಥಿನಿಲಯದ ಸಮರ್ಪಕ ಬಳಕೆ ಹಿಂಗೆ ಇನ್ನಷ್ಟ್ ವಿಷಯಗಳ ಮುಂದಿಟ್ಟಿದ್ದೊ. ಇದನ್ನ ಈ ಹೊಸ ತಂಡ ಎಷ್ಟರ ಮಟ್ಟಿಗೆ ಸಾಕಾರಗೊಳ್ಸಿದೆ ತಾ ಕಾದು ನೋಡಕು.

## ಅಗ್ನಿಗುಚ್ಛ ಪುಸ್ತಕ ಬಿಡುಗಡೆ




ರಂಗಕರ್ಮಿಯಾಗಿ, ರಂಗ ನಿರ್ದೇಶಕನಾಗಿ, ಬರಹಗಾರರಾಗಿ, ಸಂಘಕರಾಗಿ, ಗುರ್ತಿಸಿಕಂಡ ಯೋಗೇಶ್ ಹೊಸೊಳಿಕೆ ಬರ್ದ 'ಅಗ್ನಿ ಗುಚ್ಛ' ಕವನ ಸಂಕಲನ ಸುಳ್ಯ ತಾಲೂಕು 21ನೇ ಕನ್ನಡ ಸಾಹಿತ್ಯ ಸಮ್ಮೇಳನಲಿ ಬಿಡುಗಡೆ ಆತ್. ಕಿರಣ ರಂಗ ಅಧ್ಯಯನ ಸಂಸ್ಥೆ, ಗುತ್ತಿಗಾರು ಹೊರತಂದ ಈ ಪುಸ್ತಕನ ರಾಧಾಕೃಷ್ಣ ಕಲ್ಚಾರ್ ಬಿಡುಗಡೆ ಮಾಡ್ದೊ. ಸಮ್ಮೇಳನದ ಅಧ್ಯಕ್ಷ ಲಕ್ಷ್ಮೀಶ ಚೊಕ್ಕಾಡಿ, ಅಥಿತಿಗ ಮತ್ತೆ ಪದಾಧಿಕಾರಿಗ ಉಪಸ್ಥಿತರಿದ್ದೊ.

ಈಗ ಎಲ್ಲ ಕಡೆನೂ ಹಬ್ಬಗಳ ಅಬ್ಬರ ಜೋರು.. ಹರಿಸೇವೆ, ದೈವದಕೋಲ ಹಿಂಗೆ ಪಂಡ್ ಕಾಲಂದ ಬಂದ ಸಂಪ್ರದಾಯನ ಉಳ್ಸುವ ಪ್ರಯತ್ನ ನಡೀತಾ ಉಟ್ಟು. ನಿಮ್ಮ ಮನೆಗಳ್ಲಿ ನಡೆವ ದೈವದ ಕೋಲದ ವಿವರಗ ಹಂಗೆನೆ ವಿಶಿಷ್ಠವಾದ ಇತಿಹಾಸ ಇಲ್ಲರೆ ನಡಾವಳಿಗ ಇದ್ದರೆ ಓದುಗರೊಟ್ಟಿಗೆ ಹಂಚಿಕಣಿ.

ಪ್ರತಿಯೊಬ್ಬರ ಜೀವನಲೂ ಏನಾರ್ ಸಾಧನೆ ಮಾಡೊಕಾದ್ರೆ ಹಿಂದೆಂದ ಯಾರಾರೊಬ್ಬರ ಸಹಾಯ ಇದ್ದೇ ಇದ್ದದೆ. ದೂರದ ಊರಿಗೆ ಓದಿಕೆ ಹೋಕನ ಲಾಯ್ಕಲಿ ಉಪಚಾರ ಮಾಡ್ದವು. ಕೆಲ್ಸ ಹುಡ್ಕ್‌ಕನ ತಮ್ಮ ಪರಿಚಯಲಿ ಕೆಲ್ಸ ಮಾಡಿಕೊಟ್ಟವು. ಕಷ್ಟ ಕಾಲಲಿ ನೆರವಾದವು ಹಿಂಗೆ ಜೀವನದುದ್ದಕ್ಕೂ ನೆನ್ಸಕಣೋ ಜನ ಇದ್ದರೆ ಅದರ ವಿವರನ ಓದುಗರೊಟ್ಟಿಗೆ ಹಂಚಿಕಣಿ.

* * * * *

ನಮ್ಮ ಪತ್ರಿಕೆಗೆ ಕತೆ, ಕವನ, ಹನಿಗವನ, ಚುಟುಕು, ಲೇಖನ, ಅನುಭವ ಕಥನ, ಪ್ರವಾಸ ಕಥನ
ಹಂಗೆ ಪತ್ರಿಕೆ ಬಗ್ಗೆ ನಿಮ್ಮ ಅನ್ಸಿಕೆ ಅಭಿಪ್ರಾಯ ಗಳ್ನ ಬರೆಯವು ಸಂಪೂರ್ಣ ಅರೆಬಾಸೆಲಿ ಬರ್ದ್

**ಅರೆಬಾಸೆ ಮುಡ್ಪು ಪತ್ರಿಕೆ**

**C/o ವಸಂತ ಟ್ರೇಡರ್ಸ್**

**ಬೈಪಾಸ್ ರಸ್ತೆ, ಗೋಣಿಕೊಪ್ಪ –571213**

**ವಾಟ್ಸಾಪ್‌ಲಿ ಕಳ್ಸಿರೆ: 9535615759 । ಮಿಂಚಂಚೆಲಿ ಕಳ್ಸಿರೆ: arebasepatrike@gmail.com ಗೆ ಕಳ್ಸಿ ಕೊಡಿ**












* Design for permanent Irrigation Pipelines
* One time Investment * Easy to operate
* We supply your requirement




# ವಸಂತ್ ಟ್ರೇಡರ್ಸ್

ಬೈಪಾಸ್ ರಸ್ತೆ, ವೆಂಕಟಪ್ಪ ಬಡಾವಣೆ, ಗೋಣಿಕೊಪ್ಪಲು, ದ.ಕೊಡಗು 571 123

**Contact : 08274-247661 Mob : 94487 95589, 94485 87968**

ಶಾಖೆ : ಕಕ್ಕೆಹೊಳೆ, ಸೋಮವಾರಪೇಟ್ – 8904145443 E-mail : vasanthtradersgkl@gmail.com

## ನನ್ನ ಕರ್ನಾಟಕ ಅರ್ಪಿಸುವ ಸಿಗ್ಮಾ ಸ್ಪಿರುಲಿನಾ

NANNA KARNATAKA

ಸ್ಪಿರುಲಿನ ಎಂಬುದು ನೀರಿನಲ್ಲಿ ಬೆಳೆಯುವ ಪಾಚಿಯ ತರಹದ ಒಂದು ಸಸ್ಯ. ಇದು ಬರೋಬ್ಬರಿ ನೂರರಷ್ಟು ಪೌಷ್ಠಿಕಾಂಶಗಳಿಂದ ಕೂಡಿದ್ದ ಸಮಗ್ರವಾದ ನೈಸರ್ಗಿಕ ಆಹಾರ. ಒಬ್ಬ ಮನುಷ್ಯ ಆರೋಗ್ಯವಂತನಾಗಿರಲು ಏನೇನು ಬೇಕು ಆ ಎಲ್ಲಾ ಪೌಷ್ಠಿಕಾಂಶಗಳನ್ನು ಒದಗಿಸುವ ಏಕೈಕ ಆಹಾರ. ಇದಕ್ಕೆ ವಿಶ್ವಸಂಸ್ಥೆಯು 1974 ರಲ್ಲಿ ಇದಕ್ಕೆ ಮಾನ್ಯತೆ ನೀಡಿ ತಾಯಿಯ ಎದೆಹಾಲಿನ ನಂತರದ ಸ್ಥಾನ ನೀಡಿದ್ದಾರೆ.

✦ ಮಕ್ಕಳಲ್ಲಿ ಬುದ್ಧಿಶಕ್ತಿ ಹೆಚ್ಚಳ ಹಾಗು ರೋಗ ನಿರೋಧಕ ಶಕ್ತಿ ಹೆಚ್ಚಿಸುತ್ತದೆ.
✦ ಮಕ್ಕಳಿಗೆ ಉತ್ತಮ ಪ್ರೋಟೀನ್ ಒದಗಿಸುವ ಆಹಾರ
✦ ಇದರಲ್ಲಿ ಕಬ್ಬಿಣದ ಅಂಶ ಹೇರಳವಾಗಿದ್ದು ಹಿಮೋಗ್ಲೋಬಿನ್ ಪ್ರಮಾಣವನ್ನು ಹೆಚ್ಚಿಸುತ್ತದೆ.
✦ ಮಕ್ಕಳಲ್ಲಿ ಕಾಣುವ ಕಣ್ಣಿನ ಹಲವು ರೋಗಗಳನ್ನು ತಡೆಯುವಲ್ಲಿ ಉಪಯುಕ್ತ
✦ ರಕ್ತಹೀನತೆಯಿಂದ ಬಳಲುವ ಮಹಿಳೆಯರಿಗೆ ತುಂಬ ಉಪಯುಕ್ತ
✦ ರಕ್ತದಲ್ಲಿ ಕೊಬ್ಬಿನಾಂಶ ಕರಗಿಸಲು ಉಪಯುಕ್ತ
✦ ಕ್ಯಾನ್ಸರ್ತಡೆಯಲು ಉಪಯುಕ್ತ







ಅಮೆಜಾನ್.ಕಾಮ್ ಲಿ ಸ ಲಭ್ಯ

ವೆಂಕಟಪ್ಪ ಲೇಔಟ್, ಪ್ರಕೃತಿ ಕ್ರಾಸ್, ಲಕ್ಷ್ಮೀ ದೇವಸ್ಥಾನದ ಹತ್ತಿರ,
ಕೇತಿಗಾನಹಳ್ಳಿ ರಸ್ತೆ, ಬಿಡದಿ, ಬೆಂಗಳೂರು–562 109

**Mob : 9480954342 / 9739869090 / 9481826387**
**nannakarnataka1@gmail.com | www.nannakarnataka.com**